ಕನ್ನಡ ಕಾವ್ಯಮಾಲೆ

# ಭಾನುಮತಿ ಕಲ್ಯಾಣ

ಅಥವಾ

# ನಿಕುಂಭಾಸುರ ವಧೆ



ಬವಲಾಡಿ ಹಿರಿಯಣ್ಣ ಹೆಬ್ಬಾರ್





ಕಾವ್ಯಾಲಯ ಪ್ರಕಾಶಕರು
ಮೈಸೂರು

# ಪೀಠಿಕೆ

## ೧. ಕವಿ ಪರಿಚಯ

"ಭಾನುಮತಿ ಕಲ್ಯಾಣ" ಎಂಬುದು ಪ್ರಸ್ತುತ ಪ್ರಸಂಗದ ಮೊದಲನೆಯ ಹೆಸರು. ಆ ಹೆಸರಿನ ಇನ್ನೊಂದು ಯಕ್ಷಗಾನ ಪ್ರಸಂಗವು ಆಗಲೇ ಪ್ರಸಿದ್ಧವಾಗಿರುವುದರಿಂದ ಇದಕ್ಕೆ ಎರಡನೆಯದಾದ ವಿಕಲ್ಪನಾಮವನ್ನು (ವಿದ್ವಾಂಸರ ಸಲಹೆಯಂತೆ) ಕೊಡಲಾಗಿದೆ.

"ಭಾನುಮತಿ ಕಲ್ಯಾಣ"ದ ಗ್ರಂಥಕರ್ತರು ದಿವಂಗತ ಬವಲಾಡಿ ಹಿರಿಯಣ್ಣ ಹೆಬ್ಬಾರರು. ಅವರು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಬವಲಾಡಿ ಎಂಬ ಗ್ರಾಮದ ಯಕ್ಷಗಾನ ಭಾಗವತರು. ಅವರ ಉದಯವು ಶಾಲಿವಾಹನ ಶಕ ೧೭೯೮ ನೆಯ ಧಾತೃ ಸಂವತ್ಸರದ ಮಿಥುನ ಮಾಸದ ೨೧ ನೆಯ ದಿನದಲ್ಲಿ; ಅಸ್ತವು ಶಾ. ಶ. ೧೮೬೩ ನೆಯ ಚಿತ್ರಭಾನುಸಂವತ್ಸರದ ಮೀನಮಾಸ ೫ನೆಯ ದಿನದಲ್ಲಿ. ಗ್ರಂಥಕರ್ತರು ಕೈಲಾಸವಾಸಿಗಳಾದದ್ದು ತಾ|| 19-3-1942 ರಲ್ಲಿ; ಅಂದರೆ ಅವರು ಗತಿಸಿ ಇಂದಿಗೆ ಹದಿನಾರು ವರ್ಷಗಳಾದವು. ಅವರ ಧರ್ಮಪತ್ನಿ ಸುಬ್ಬಮ್ಮನವರೂ ಏಕಮಾತ್ರ ಪುತ್ರ ಮಾರ್ತಾಂಡ ಹೆಬ್ಬಾರರೂ ಮೊದಲೇ ದಿವಂಗತರಾಗಿದ್ದರು.

ಹಿರಿಯಣ್ಣ ಹೆಬ್ಬಾರರು ಬರೆದ ಪ್ರಸಂಗಗಳು ಮೂರು: ಪಾಂಡವ ವಿಜಯ, ವಿಶ್ವಾಮಿತ್ರ ಪ್ರತಾಪ ಮತ್ತು ಭಾನುಮತಿ ಕಲ್ಯಾಣ. ಮೊದಲಿನೆರಡನ್ನು ಉಡುಪಿಯ ದಿವಂಗತ ಪಾವಂಜೆ ಗುರುರಾಯರು ಪ್ರಕಟಪಡಿಸಿದ್ದರು. ಪ್ರಸ್ತುತ 'ಭಾನುಮತಿ ಕಲ್ಯಾಣ'ದ ಹಸ್ತಪ್ರತಿ ಹಿರಿಯಣ್ಣ ಹೆಬ್ಬಾರರೇ ಸ್ವತಃ ತಯಾರಿಸಿದ್ದು. ಅದರ ನಕಲು ಈಗ ಕುಂದಾಪುರ ತಾಲೂಕಿನ ಉಳ್ಳೂರು ಗ್ರಾಮದ ಶ್ರೀ ಸುಬ್ರಾಯ ಉಡುಪರ ವಶದಲ್ಲಿದೆ.

ಹೆಬ್ಬಾರರು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ವಿಖ್ಯಾತ ವಿದ್ವಾಂಸರಾಗಿದ್ದರು. ರಾಷ್ಟ್ರೀಯ ಚಳವಳಿಯ ಕಾಲದಲ್ಲಿ ರಾಷ್ಟ್ರೀಯ ಪಾಠಶಾಲೆಯಲ್ಲಿ ಸಂಸ್ಕೃತ ಪಾಠ ಹೇಳುತ್ತಿದ್ದರು. ಕನ್ನಡದಲ್ಲಿ ದೇವತಾಸ್ತುತಿ ಪರವಾದ ಹಲವಾರು ಸುಂದರ ಯಕ್ಷಗಾನ ತುಂಡು ಪದಗಳನ್ನವರು ರಚಿಸಿ

ದ್ದಾರೆ. ಅವುಗಳ ಹಸ್ತಪ್ರತಿ ಈಗ ಕುಂದಾಪುರ ತಾಲೂಕಿನ ಮೊಗೇರಿ ಗ್ರಾಮದಲ್ಲಿರುವ ರಾಮಪ್ಪ ಅಡಿಗಳ ವಶದಲ್ಲಿದೆ.

ಹಿರಿಯಣ್ಣ ಹೆಬ್ಬಾರರು ಮುದ್ದಣ ಮಿತ್ರರಾದ ಮಹಾವಿದ್ವಾಂಸರೆನಿಸಿದ್ದ ಬವಲಾಡಿ ವೆಂಕಟರಮಣ ಹೆಬ್ಬಾರರ ಅನುಜರು. ಅವರ ಅನುಜರು ಯಕ್ಷಗಾನ ಭಾಗವತರಾದ ದಿವಂಗತ ಬವಲಾಡಿ ಸೀತಾರಾಮ ಹೆಬ್ಬಾರರು.

ಹಿರಿಯಣ್ಣ ಹೆಬ್ಬಾರರು ಮೈಸೂರು ಸೀಮೆಯ ಮಲೆನಾಡಿಗರಿಗೆ ಚಿರಪರಿಚಿತರಾಗಿದ್ದರು. ಪ್ರತಿ ವರ್ಷವೂ ಅವರು ತಮ್ಮಂದಿರೊಡನೆ ಯಕ್ಷಗಾನ ತಾಳ ಮದ್ದಲೆಯ ಮೇಳದೊಡನೆ ಮಲೆನಾಡಿನಲ್ಲಿ ಸಂಚರಿಸುತ್ತಿದ್ದರು. ಅವರು ಮೃದಂಗವಾದನದಲ್ಲಿ ನಿಷ್ಣಾತರಾಗಿದ್ದರು. ಅದರಿಂದಲೇ ಅವರ ತುಂಡು ಪದಗಳಲ್ಲಿ ಯಕ್ಷಗಾನದ ಅತ್ಯಾಕರ್ಷಕವಾದ ವಿವಿಧ ಗತ್ತುಗಳುಳ್ಳ ಧಾಟಿಗಳ ರಚನೆ ಕಂಡುಬರುತ್ತದೆ.

ಪ್ರಸ್ತುತ "ಭಾನುಮತಿ ಕಲ್ಯಾಣ"ದ ಹಸ್ತಪ್ರತಿಯನ್ನು ಕುಮಟೆಯ ಸುಲಭ ಸಾಹಿತ್ಯ ಮಾಲೆಯ ಪ್ರಕಾಶಕರಾದ ಶ್ರೀಮಾನ್ ಎಸ್. ಆರ್. ಹೆಗಡೆಯವರ ಮೂಲಕ ಮೈಸೂರಿನ ಕಾವ್ಯಾಲಯದ ಪ್ರಕಾಶಕರಿಗೆ ಈ ಲೇಖಕನು ಕಳಿಸಿಕೊಟ್ಟಿದ್ದಾನೆ. ಕಾವ್ಯಾಲಯದ ಶ್ರೀ ಚಿದಂಬರರು ಈ ಪ್ರಸಂಗವನ್ನು ಪ್ರಕಟಿಸುವುದಾಗಿ ಒಪ್ಪಿಕೊಂಡದ್ದಕ್ಕೆ ಪ್ರಸ್ತುತ ಲೇಖಕನು ಚಿರಋಣಿ.

ಯಕ್ಷಗಾನನಾಟಕ ಪದ್ಧತಿಯು ಕಡಲುಗನ್ನಡಸೀಮೆಯ ಹೆಮ್ಮೆಯ ಕಲಾಮಾರ್ಗ. ಅದರ ಜನಪ್ರಿಯತೆ ಅಲ್ಲಿ ಅಸಾಧಾರಣ. ಅದು ಐತಿಹಾಸಿಕ ಕಾಲದಿಂದ ಪಂಡಿತ ಪಾಮರರಿಬ್ಬರಿಗೂ ಪ್ರಿಯವಾಗಿ ಹೆಚ್ಚಾಗಿ ಸಾರ್ವಜನಿಕ ಪ್ರೋತ್ಸಾಹದಿಂದಲೇ ಬೆಳೆದುಕೊಂಡು ಬಂದಿದೆ. ಕೆಲವೊಮ್ಮೆ ರಾಜಮರ್ಯಾದೆಯನ್ನೂ ಅದು ದೊರಕಿಸಿಕೊಂಡಿತ್ತು. ಕೋಟದ ಶ್ರೀ ಶಿವರಾಮ ಕಾರಂತರು ಯಕ್ಷಗಾನದ ಇತಿಹಾಸದ ಮೂಲಶೋಧವನ್ನೊಳಗೊಂಡ ಗ್ರಂಥವನ್ನು ರಚಿಸಿ ಹೊರಗೆಡಹಿದ್ದಾರೆ. ಅದರ ಅವಲೋಕನದಿಂದ ರಸಿಕರಿಗೆ ಬಹಳ ಪ್ರಯೋಜನವಾದೀತು. ಕನ್ನಡ ನೆಲದ ಉಸಿರಾದ ಯಕ್ಷಗಾನ ದೇಸಿಪದ್ಧತಿಯ ಪ್ರಾಚೀನತೆ, ಕನ್ನಡಿಗರ ನಾಟಕ ಪ್ರಿಯತೆ,

ಹಾಗೂ ರಂಗವಿದ್ಯಾನೈಪುಣ್ಯಗಳಿಗೆ ಸಾಕ್ಷಿಯಾಗಿದೆ ಎಂಬುದನ್ನು ಶ್ರೀಗಳಾದ ಮುಳಿಯ ತಿಮ್ಮಪ್ಪಯ್ಯ, ರಾ. ಭ. ಹಾಸಣಿಗೆ, ಜಿ. ಆರ್. ಪಾಂಡೇಶ್ವರ್ ಮತ್ತು ಶಿವರಾಮ ಕಾರಂತರ ಬರಹಗಳಿಂದ ತಿಳಿಯಬಹುದಾಗಿದೆ.

ಕುಮಟಾ (ಉ.ಕ.)
೧೮-೯-೧೯೫೮

ಬಿ. ಎಚ್. ಶ್ರೀಧರ

## ೨. ಕಥಾಸಾರ

ಭಾನುಮತಿ ಕಲ್ಯಾಣ ಅಥವಾ ನಿಕುಂಭಾಸುರ ವಧೆ ಎಂಬ ಈ ಯಕ್ಷಗಾನ ದೃಶ್ಯದ ವಸ್ತು ಗ್ರಂಥದ ಆದಿಯಲ್ಲಿ ಹೇಳಿರುವಂತೆ ಹರಿವಂಶದಿಂದ ಆಯ್ದುಕೊಂಡದ್ದು. ಸಂಕ್ಷೇಪತಃ ಕಥಾಸಂವಿಧಾನ ಇಂತಿದೆ:

ದ್ವಾರಕೇಶ್ವರ ಕೃಷ್ಣನ ಮಗ ಭಾನು. ಭಾನುವಿನ ಮಗಳು ಭಾನುಮತಿ. ಯಾದವರು ಜಲಕ್ರೀಡೆಯಾಡಲು ಹೋದಾಗ ಅಲ್ಪರಕ್ಷಿತವಾದ ಕನ್ಯಾಪುರವೆಂಬಲ್ಲಿ ಗೆಳತಿಯರೊಡನೆ ನಲಿಯುತ್ತಿದ್ದ ಭಾನುಮತಿಯನ್ನು ಷಟ್ಪುರಾಧಿಪತಿ ನಿಕುಂಭ ಹೊತ್ತುಕೊಂಡುಹೋದ. ಹಾಗೆ ಅವಳನ್ನೊಯ್ಯಲು ಅವನು ಗಂಧರ್ವ ರೂಪದಿಂದ ಬಂದಿದ್ದನು.

ಭಾನುಮತಿಯ ಗೆಳತಿಯರು ಈ ದುರ್ವಾರ್ತೆಯನ್ನು ಅರ್ಜುನ–ಮನ್ಮಥರೊಡನೆ ವಿಹಾರಕ್ಕೆ ಹೋಗಿದ್ದ ಕೃಷ್ಣನಿಗೆ ತಿಳಿಸಿದರು. ಕೂಡಲೇ ಈ ಮೂವರು ಗರುಡಾರೂಢರಾಗಿ ನಿಕುಂಭಾಸುರನು ಹೋದ ಷಟ್ಪುರ ಮಾರ್ಗದಲ್ಲಿ ಹಾರಿದರು; ಅವನನ್ನು ಹಿಡಿದರು. ಅವನೊಡನೆ ಹೋರಾಡಿ ಅವನ ಒಂದು ತೋಳನ್ನು ಕಡಿದು ಅವನನ್ನು ಸೋಲಿಸಿ ಭಾನುಮತಿಯನ್ನವರು ಬಿಡಿಸಿಕೊಂಡು ಬಂದರು.

ಈ ನಡುವೆ ಸತ್ಯಭಾಮಾಸೂನುವಾದ ಭಾನು ಕನ್ಯಾಪುರಕ್ಕೆ ಬಂದ. ಅಲ್ಲಿ ತನ್ನ ಮಗಳಾದ ಭಾನುಮತಿಯ ಅಪಹಾರವನ್ನೂ ಅವಳನ್ನು ಬಿಡಿಸಿಕೊಂಡು ಬರಲು ತನ್ನ ತಂದೆ ಹಾಗೂ ಸಹೋದರ ಮನ್ಮಥ ಹೋದುದನ್ನೂ ಕೇಳಿ, ಅವರ ಸಹಾಯಕ್ಕೆಂದು ಸಜ್ಜಿತನಾಗಿ ಹೊರಡಲು ನಿಶ್ಚಯಿಸುವಷ್ಟರಲ್ಲಿ ಅವರೂ ಅರ್ಜುನನೂ ಭಾನುಮತಿಯೊಡನೆ ಕನ್ಯಾಪುರಕ್ಕೆ ಬಂದೇ ಬಿಟ್ಟರು. ಆಗ ಎಲ್ಲರಿಗೂ ಸಂತೋಷವಾಯಿತು. ಜಲಕ್ರೀಡೆಗೆ ಹೋಗಿದ್ದ ವಸುದೇವಾದಿ ಯಾದವರೂ ಹಿಂದಿರುಗಿ ಬಂದು ನಡೆದ ಸಂಗತಿಯ ಸುಖಾಂತವನ್ನು ಕೇಳಿ ಆನಂದಿತರಾದರು.

ಅನಂತರ ಯಾದವರು ಸಮುದ್ರಯಾತ್ರೆಗೆ ಹೋಗಿ ಆಡಿದ ಜಲಕ್ರೀಡೆಗೆ ಪೂರಕವಾಗಿ ಷಟ್ಪುರದ ನದೀತಟದಲ್ಲಿ ಅಶ್ವಮೇಧ ಯಜ್ಞವನ್ನು ಆರಂಭಿಸಿದರು, ಈ ಮಧ್ಯದಲ್ಲಿ ತನ್ನ ತೋಳೊಂದನ್ನೂ ಭಾನುಮತಿಯನ್ನೂ

ಕಳೆದುಕೊಂಡು ಊರಿಗೆ ಹಿಂದಿರುಗಿದ ನಿಕುಂಭನು ಗೆಳೆಯನಾದ ದ್ವಿವಿದ ನೆಂಬ ಕಪಿರಾಜನಿಗೆ ಯಾದವರನ್ನು ಹಣಿಯಲು ತನಗೆ ನೆರವಾಗಬೇಕೆಂದು ಹೇಳಿಕಳಿಸಿದನು. ಮೈಂದ ದ್ವಿವಿದರು ಸುಗ್ರೀವನ ಸ್ನೇಹಿತರಾಗಿದ್ದವರು; ಮೈಂದ ಅಣ್ಣ, ಈ ದ್ವಿವಿದ ತಮ್ಮ. ಇವನು ಅಯುತ ಸಂಖ್ಯೆ ಆನೆಗಳ ಬಲವುಳ್ಳ ಕಪಿ. ಈತನು ದ್ವಾರಕೆಗೆ ಹೋಗಿ ನಿಕುಂಭನ ಬೇಡಿಕೆಯ ಪ್ರಕಾರ ಆ ಪ್ರದೇಶದ ಗೋ–ದ್ವಿಜ–ತಪಸ್ವಿಗಳನ್ನು ಗೋಳುಪಡಿಸುತ್ತ, ಋಷ್ಯಾಶ್ರಮಗಳನ್ನು ಹಾಳುಮಾಡುತ್ತ, ರೈವತ ಪರ್ವತದ ವನದಲ್ಲಿ ಹೊಕ್ಕು ಅಲ್ಲಿಯ ಬೇಡರ ಮನೆಗಳಿಗೆ ಬೆಂಕಿ ಹಚ್ಚುತ್ತ, ಗಿಡಮರಗಳನ್ನು ಮುರಿಯುತ್ತ, ಹಣ್ಣು ಹಂಪಲುಗಳನ್ನು ಸೂರೆಮಾಡುತ್ತ, ಎದುರಾದವರಿಗೆ ಕಲ್ಲು ಮರ-ಮಟ್ಟುಗಳಿಂದ ಹೊಡೆಯುತ್ತ ದಾಳಿಮಾಡತೊಡಗಿದನು. ಈ ಸುದ್ಧಿ ಬಲರಾಮನ ಕಿವಿಗೆ ಬಿದ್ದು ಅವನು ಅಲ್ಲಿಗೆ ತೆರಳಿ ದ್ವಿವಿದನನ್ನು ಒನಕೆಯಿಂದ ಹೊಡೆದು ಕೊಂದು, ಅವನ ಸೇನೆಯ ಇತರ ಕಪಿಗಳನ್ನು ಯಥೇಷ್ಟವಾಗಿ ಹೊಡೆದು ಓಡಿಸಿದನು.

ಷಟ್ಪುರ ಚಕ್ರವರ್ತಿ ನಿಕುಂಭನಿಗೆ ದ್ವಿವಿದ ಸಂಹಾರದ ಹಾಗೂ ತನ್ನೂರ ನದೀ ತೀರದಲ್ಲಿ ಯಾದವರು ಮಾಡತೊಡಗಿದ ಯಜ್ಞದ ಸುದ್ದಿಗಳು ತಲುಪಿದವು. ಅವನು ಕೆರಳಿ ಕೆಂಡವಾದ. ಅವನೂ ಅವನ ಸಂಗಡಿಗರೂ ಸೇರಿ ಒಟ್ಟು ಅರುವತ್ತು ಜನ ದೈತ್ಯರು ಬ್ರಹ್ಮನಲ್ಲಿ ತಪಸ್ಸು ಮಾಡಿ ಅಜಯ್ಯ ಶಕ್ತಿಗಳನ್ನು ಗಳಿಸಿದವರಾಗಿದ್ದರು. ನಿಕುಂಭನಿಗೆ ಗಾಂಧರ್ವ, ತಾಪಸ ಮತ್ತು ದಾನವ ಎಂಬ ಮೂರು ಶರೀರಗಳಲ್ಲಿ ಬದುಕುವ ಹಾಗೂ ವಿಷ್ಣು ಶಕ್ತಿಯ ಹೊರತಾಗಿ ಮಿಕ್ಕ ಯಾರಿಂದಲೂ ಮರಣವಿಲ್ಲದ ವರವಿತ್ತು. ಅವನು ದೈತ್ಯ ರೂಪದಿಂದ ಜನಶೋಷಣೆ ಮಾಡಿದರೆ, ತಾಪಸ ರೂಪದಿಂದ ದೈತ್ಯರ ತಾಯಿಯಾದ ದಿತಿಯನ್ನು ಸೇವಿಸುತ್ತಿದ್ದನು; ತನ್ನ ಗಾಂಧರ್ವ ರೂಪದಿಂದ ಅವನು ಬೇಕಾದಲ್ಲಿ ಸಂಚರಿಸಿ ಜನರ ಒಳ ಮರ್ಮಗಳೆಲ್ಲವನ್ನೂ ಪ್ರತ್ಯಕ್ಷ ನಿರೀಕ್ಷಿಸುತ್ತ ಹಾಗೂ ಮನೆಗೆ ಬಂದು ತಾನು ಬಲಾತ್ಕಾರದಿಂದ ಎಳತಂದ ಹೆಂಗಸರನ್ನು ದಣಿಸುತ್ತ ಕಾಲ ಹಾಕುತ್ತಿದ್ದನು. ಭಾನುಮತಿಯನ್ನು ಕದ್ದೊಯ್ಯುವಾಗ ಸಿಕ್ಕಿಬಿದ್ದು ಕೈಗಳೆದ ತನ್ನ ಗಾಂಧರ್ವ ಶರೀರವನ್ನು ತಾನೇ ಕೊಂದುಕೊಂಡು, ದಿತಿ ಸೇವೆಗಿಟ್ಟಿದ್ದ ಮುನಿ ಶರೀರವನ್ನು ತನ್ನೊಳ

ಗೆಳೆದುಕೊಂಡು, ಮೂರು ಶರೀರಗಳಲ್ಲಿ ಹಂಚಿಹೋಗಿದ್ದ ತನ್ನ ಬಲವನ್ನು ದೈತ್ಯರೂಪವೊಂದರಲ್ಲೇ ನಿಕುಂಭಾಸುರನು ಸಂಗ್ರಹಿಸಿಕೊಂಡು ಯಾದವರನ್ನು ನಿರ್ಮೂಲ ಮಾಡಲು ಅಣಿಮಾಡಿದನು. ಕೌರವ-ಕರ್ಣ-ರುಕ್ಮಿ ಮುಂತಾದ ಅರಸರಿಗೆ ದೊಡ್ಡ ಸಂಪತ್ತನ್ನು ಕೊಡುವ ಆಸೆತೋರಿಸಿ ಸಮಯ ಬಂದಾಗ ಯಾದವರ ಮೇಲೆ ಬಿದ್ದು, ಅವರನ್ನು ನಾಶಮಾಡಲು ಸಜ್ಜುಗೊಳಿಸಿಟ್ಟು, ಮಾಯಾವಿಯಾದ ನಿಕುಂಭಕನು ಯಜ್ಞಶಾಲೆಗಿನ್ನೂ ಬಲರಾಮನು ಬಂದಿರದುದನ್ನು ಕಂಡು ತಾನು ಮಾಯಾ ಬಲರಾಮನಾಗಿ ಬಂದು ವಸುದೇವಾದಿಗಳಿಗೆ ಬುದ್ಧಿಯಿಲ್ಲವೆಂದು ದೊಡ್ಡದಾಗಿ ಬೈದು, ಭಾನುಮತಿಯನ್ನೂ ಅವಳ ಗೆಳತಿಯರಾದ ಇತರ ಯಾದವಿಯರನ್ನೂ ಸುರಕ್ಷಿತವಾಗಿ ಊರಲ್ಲಿ ಇಟ್ಟುಬರುವೆನೆಂದು ಕರೆದುಕೊಂಡು ಹೋಗಿ ತನ್ನ ಷಟ್ಪುರದ ಜೈಲಿನಲ್ಲಿ ಭದ್ರವಾಗಿ ಅಡಗಿಸಿಟ್ಟನು.

ಆಮೇಲೆ ಬಲರಾಮನು ಯಜ್ಞಸ್ಥಳಕ್ಕೆ ಬಂದ. ಭಾನು ಅವನನ್ನು ಕುರಿತು ಹೆಂಗಸರೆಲ್ಲರೂ ಸುರಕ್ಷಿತರಾಗಿದ್ದಾರೆಯೇ ? ಎಂದು ಕೇಳಿದಾಗ ಆಶ್ಚರ್ಯಗೊಂಡು ತನಗೇನು ಗೊತ್ತೆಂದು ಉತ್ತರಿಸಿದ. ಅವನು ಸುಳ್ಳು ಹೇಳುವನೆಂದು ಭಾನು ಹೇಳಿದಾಗ, ಅದಕ್ಕೆ ವಸುದೇವ ಹಾಗೂ ಬ್ರಾಹ್ಮಣರ ಸಾಕ್ಷಿ ದೊರೆತಾಗ ಬಲರಾಮ ಸಿಟ್ಟಿನ ಮೂರ್ತಿಯಾದ; 'ಕೃಷ್ಣ ಎಲ್ಲಿದ್ದಾನೆ? ಅವನನ್ನು ಮಾತಾಡಿಸಿ ಹೊರಟುಬಿಡುತ್ತೇನೆ ಇಲ್ಲಿಂದ' ಎಂದು ಬಲರಾಮನು ಗರ್ಜಿಸುವಷ್ಟರಲ್ಲಿ ನಾರದರು ದಯಮಾಡಿಸಿ, ನಿಜಸಂಗತಿಯನ್ನರುಹಿ, ಅವರೆಲ್ಲರನ್ನೂ ಸಮಾಧಾನಗೊಳಿಸಿದರು. ಆ ಬಳಿಕ ಕೃಷ್ಣನ ನೇತೃತ್ವದಲ್ಲಿ ಯಾದವ ಸೇನೆ ನಿಕುಂಭನೊಡನೆ ಹೋರಿ ತಮ್ಮ ಹೆಂಗಸರನ್ನು ಬಿಡಿಸಿಕೊಂಡು ಬರಲು ನಿರ್ಧರಿಸಿತು. ಈ ಸೈನ್ಯವನ್ನು ಷಟ್ಪುರದಲ್ಲಿ ನಿಕುಂಭಸೈನ್ಯ ಎದುರಿಸಿತು. ಯಾದವರಿಗೆ ಪಾಂಡವರದಷ್ಟೇ ಬೆಂಬಲವಾದರೆ, ನಿಕುಂಭನಿಗೆ ಯಾದವರ ಯಜ್ಞಕ್ಕೆ ಆಮಂತ್ರಿತರಾಗಿ ಬಂದಿದ್ದ ಚೈದ್ಯ-ಮಾಗಧ-ಮಾದ್ರ-ಕೌರವ-ಕರ್ಣ-ಶಕುನಿ-ಜಯದ್ರಥ ಮುಂತಾದವರೆಲ್ಲರ ಬೆಂಬಲವಿತ್ತು.

ಯುದ್ಧದ ಪೂರ್ವಾರ್ಧದಲ್ಲಿ ನಿಕುಂಭನ ಕೈ ಮೇಲಾಯಿತು. ಯಾದವ ಸೈನ್ಯ ದಿಕ್ಕೆಟ್ಟೋಡುವಂತೆ ನಿಕುಂಭನ ಸೈನಿಕರು ಪ್ರತಾಪ

ತೋರಿಸಿದರು. ನಿಕುಂಭ ಪರಿಘದಿಂದ ಹೊಡೆದಾಗ ಸ್ವತಃ ಕೃಷ್ಣನೇ ಮೂರ್ಛೆ ಹೋದನು. ಬಲರಾಮ ಕೃಷ್ಣನೆಡೆಗೆ ಬಂದು ಅಳತೊಡಗಿದನು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಆಗ ಕೃಷ್ಣನು ಲಕ್ಷ್ಮೀರೂಪದಿಂದ ಎದ್ದು ನಿಂತು ಎಲ್ಲರಿಗೂ ಅಭಯವಿತ್ತು, ನಿಕುಂಭಕನ ಸಂಹಾರ ನಿಶ್ಚಿತವೆಂದೂ ತಾನೀಗ ಬ್ರಹ್ಮವಿಧಿಯಂತೆ ವಿಷ್ಣುಶಕ್ತಿರೂಪದಿಂದ (ತ್ರಿಮೂರ್ತಿಗಳಲ್ಲೊಬ್ಬನಾದ) ವಿಷ್ಣುವಿಗೆ (ಅರ್ಥಾತ್ ತನಗೆ) ಪೀಡೆಯಿತ್ತ ನಿಕುಂಭನನ್ನು ಸಂಹರಿಸುವೆನೆಂದೂ ಘೋಷಿಸಲು ಯಾದವರೆಲ್ಲ ಉತ್ಸಾಹಿತರಾದರು. ಶಕ್ತಿಯೂ ಬಲರಾಮಾದಿಗಳೂ ರುಕ್ಮಿ-ಕರ್ಣ ಮೊದಲಾದವರನ್ನು ಸೋಲಿಸಿ ಸೆರೆಮನೆಗಟ್ಟಿದರು. ಕೌರವ ಬಲರಾಮನೊಡನೆ ರಾಜಿಮಾಡಿಕೊಂಡು ಹೋದ. ಇದನ್ನು ನೋಡಿ ದೈತ್ಯೇಂದ್ರನು ಮಾಯಾಯುದ್ಧವನ್ನಾರಂಭಿಸಿಬಿಟ್ಟ! ಅವನು ಮಾಡಿಬಿಟ್ಟ ಮೊದಲ ಮಾಯೆ ಎಂದರೆ ಐಮೊಗದ ಒಂದು ಸಿಂಹ. ಅದರ ನಾಲಗೆಗಳು ಉರಿಯುತ್ತಿದ್ದುವು; ಕಣ್ಣುಗಳು ಕಿಡಿ ಸೂಸುತ್ತಿದ್ದವು. ಅದು ನರಸಿಂಹಾವತಾರಕ್ಕೆ ನೂರುಪಟ್ಟು ಘೋರವಾಗಿತ್ತು; ಅದರ ಆಕೃತಿ 'ಒಂದು ಯೋಜನೋನ್ನತಿ-ಕ್ರೋಶಮಾನ' ಉಳ್ಳದ್ದಾಗಿತ್ತು.

ಆ ಎತ್ತರದ, ಆ ಉದ್ದದ ಸಿಂಹವು ಮತ್ತೆ ಯಾದವರ ಹೃದಯವನ್ನು ವಿದ್ರವಿಸಿತು! ಅದರ ಘಟೋತ್ಕಚಲೀಲೆ ಕೆಲಕಾಲ ವಿಲಯದ ವಾತಾವರಣವನ್ನು ಹುಟ್ಟಿಸಿದರೂ ವಿಷ್ಣು ಶಕ್ತಿರೂಪದಲ್ಲಿ ರಥಾರೂಢನಾಗಿ ನಿಂತಿದ್ದ ಕೃಷ್ಣನು ಮಾಯಾಹರಣದ ಅಸ್ತ್ರಬಿಟ್ಟು ಅದರ ಕತೆಗೆ ಇತಿಶ್ರೀ ಬರೆದನು. ಬಳಿಕ ಅಡಗಿದ್ದ ನಿಕುಂಭ ಅಷ್ಟೇ ಘೋರ ರೂಪದ ಇತರ ಕ್ರೂರಮೃಗಗಳನ್ನು ಮಾಯೆಯಿಂದ ನಿರ್ಮಿಸಿ ಛೂ ಬಿಟ್ಟು ಯಾದವ ಸೇನೆಯನ್ನು ಅಲ್ಲೋಲ ಕಲ್ಲೋಲಗೊಳಿಸಿದ. ಅವಕ್ಕೂ ವಿಷ್ಣುಶ್ರೀ ಮೊದಲಿನ ಮಾಯಾಮೃಗದ ಗತಿಯನ್ನೇ ಕಾಣಿಸಿತು. ಅನಂತರ ಸ್ವತಃ ನಿಕುಂಭನೇ ಎದುರು ಬಂದು ಕೃಷ್ಣನೊಡನೆ ಅದ್ವಿತೀಯವಾಗಿ ಹೋರಾಡಿ ಅವನ ಯಾವ ಅಸ್ತ್ರಕ್ಕೂ ಮಣಿಯದಾದನು! ಭಾರತದ ಪುರಾಣ ಪ್ರಪಂಚದಲ್ಲೇ ಸರ್ವಾಧಿಕ ಶಕ್ತಿಯುಳ್ಳದ್ದೆನಿಸಿದ ಸುದರ್ಶನವನ್ನೇ ಎತ್ತಬೇಕಾಗಿ ಬಂದು, ಅದರಿಂದ ಉಪಮಾತೀತ ಬಲಸಂಪನ್ನನಾಗಿದ್ದ ಆ ನಿಕುಂಭನನ್ನು ಕೃಷ್ಣನು

ಅವನ ಅನುಯಾಯಿಗಳ ಸಮೇತ ಯಮುನಿಗೆ ಮೀಸಲಿಟ್ಟ; ಯಮ ಸ್ವೀಕರಿಸಿದ. 'ಯತೋ ಧರ್ಮಃ ತತೋ ಜಯಃ' ಎಂಬುದಾಗ ಸಿದ್ಧವಾದಂತಾಯಿತು. ಕೃಷ್ಣನಾಗ ದಯೆಯಿಂದ ರುಕ್ಮಿ-ಕರ್ಣಾದಿಗಳನ್ನು ಸೆರೆಯಿಂದ ಮುಕ್ತಗೊಳಿಸಿದನು.

ಅಸುರಾಂತಕ ಕೃಷ್ಣ ಮನೆಗೆ ಬಂದು ಮೊಮ್ಮಗಳಾದ ಭಾನುಮತಿಯ ಅಪೇಕ್ಷೆಯಂತೆ ಧರ್ಮಿಷ್ಠರೆನಿಸಿದ ಪಾಂಡವರಲ್ಲಿ ಕಿರಿಯನಾದ ಸಹದೇವನಿಗೆ ಅವಳನ್ನಿತ್ತು, ಕಲ್ಯಾಣವನ್ನು ಕಳೆಗೊಳಿಸಲು ಅನುಮತಿಯಿತ್ತನು. ಆ ಪ್ರಕಾರ ಅವಳಪ್ಪ ಭಾನು ಎಲ್ಲ ವ್ಯವಸ್ಥೆಯನ್ನೂ ಮಾಡಿ ದ್ವಾರಾವತಿಯಲ್ಲಿ ಭಾನುಮತಿ ಕಲ್ಯಾಣವನ್ನು ಸಾಂಗೋಪಾಂಗವಾಗಿ ನೆರವೇರಿಸಿದನು.

ಯಕ್ಷಗಾನವು " ಭಾಗವತರ ಆಟ"; "ದಶಾವತಾರದ ಆಟ" ಎಂಬುದಕ್ಕೆ ಪ್ರಸ್ತುತ ಪ್ರಸಂಗ ಪರಮ ಪ್ರಮಾಣವಾಗಿದೆ. ಇಲ್ಲಿ ವಿಷ್ಣುವಿನ ಅವತಾರವೇ ನಾಯಕ; ಆ ಅಸುರಾರಿಗೆ ನಿಕುಂಭಾಸುರನೇ ಪ್ರತಿನಾಯಕ. ಭಗವಾನ್ ಕೃಷ್ಣನ ಭಕ್ತರಾದ ಯಾದವರೂ ಪಾಂಡವರೂ ಇತರರೂ ಭಾಗವತರು. ಇದೊಂದು ಆಟ ಅರ್ಥಾತ್ ದೃಶ್ಯ—ನೃತ್ಯ, ಗೀತ, ವಾದಿತ್ರಗಳಿಂದಲೂ ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕ ಎಂಬ ಚತುರ್ವಿಧ ಅಭಿನಯದಿಂದಲೂ ಕೂಡಿದ ರೂಪಕ (Drama). ಸೂತ್ರಧಾರರಾದ ಮೇಳದ 'ಭಾಗವತ'ರಿಂದ ಹಿಡಿದು ಧರ್ಮಾಧ್ಯಕ್ಷನಾದ ಭಗವಂತನ ಜಯದಲ್ಲಿ ಆಸ್ಥೆಯುಳ್ಳ ಎಲ್ಲರಿಗೂ ಇದು ಆನಂದದಾಯಕವಲ್ಲವೆ ?

**ಬಿ. ಎಚ್. ಶ್ರೀ.**

ಶ್ರೀಃ

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ

**ಶ್ರೀ ಹರಿವಂಶಪುರಾಣದೊಳಗಣ**

# ಯಕ್ಷಗಾನ

# ಭಾನುಮತೀ ಕಲ್ಯಾಣ

## ಪ್ರಾರ್ಥನೆ (ನಾಂದಿ)

ಶಾರ್ದೂಲವಿಕ್ರೀಡಿತ ವೃತ್ತ

ಶ್ರೀ ಗೌರೀಮುಖಪದ್ಮಪಂಕಜಸಖಂ ಶ್ರೀಕಂಠಮುಗ್ರಂ ಶಿವಂ
ವಾಗೀಶಾದ್ಯಮರೌಘವಂದ್ಯಚರಣಂ ಚಂದ್ರಾರ್ಧಚೂಡಂ ಮೃಡಂ ।
ಯೋಗಿಧ್ಯಾನ ಸುಗಮ್ಯಮೇಕಮಭವಂ ದಕ್ಷಾಧ್ವರಧ್ವಂಸಿನಂ
ನಾಗಾರಿಧ್ವಜಮಿತ್ರಮತ್ರ ಮನಸಾ ಧ್ಯಾಯಾಮಿ ಲಿಂಗೇಶ್ವರಂ ॥

ರಾಗ—ನಾಟಿ; ತಾಳ-ಝಂಪೆ

ಜಯತು ವಾರಣವದನ
ಜಯತು ವಿರಹಿತಮದನ
ಜಯತು ತ್ರಿಭುವನ ಪೂತ ಜಯತು ಗಣನಾಥ ।
ಜಯತು ಜಯತು ಜಯತು ॥೧॥
ವಿಘ್ನವಿಪಿನ ಕೃಶಾನು
ವಿಘ್ನರಜನೀಭಾನು
ವಿಘ್ನಮೇಘಸಮೀರ ವಿಘ್ನೇಶ ವೀರ
ಜಯತು ಜಯತು ಜಯತು ॥೨॥
ಪರಮವಿಸ್ಮಯಚರಿತ
ಪರತತ್ವ ಗುಣಭರಿತ
ವರವಿನಾಯಕದೇವ ಶರಣ ಸಂಜೀವ ।
ಜಯತು ಜಯತು ಜಯತು ॥೩॥

ರಾಗ—ನಾಟ; ತಾಳ-ರೂಪಕ

ಶ್ರೀಕಮಲೇಶ್ವರ ದುರ್ಜನ-
ಭೀಕರ ಭಯಹರ ಸಜ್ಜನ-
ಶೋಕವಿನಾಶನ ಪರಮಕೃ-
ಪಾಕರ ದನುಜಾರಿ।
ಆಕಲಿತಾಖಿಳರಾಜಿತ
ಲೋಕೇಶಾದಿಸುಪೂಜಿತ
ಸಾಕಾರನಿರಾಕಾರ ಮ-
ಹಾಕಾರ ಮುರಾರೇ॥
ಜಯ ಜಯ ಜಯ ಜಯತು ॥ ೧ ॥

ಕರುಣಾಸಾಗರ ಮಂದರ-
ಗಿರಿಧರ ನಿರುಪಮ ಸುಂದರ
ಶರದಿಂದು ಸಹಸ್ರೋಪಮ
ವರಸದ್ಯುತಿ ವದನ
ಧರಣೀಭಾರಕ ಹಾರಕ
ದುರಿತಾತ್ಮಕುಲವಿದಾರಕ
ಪರಮಾನಂದ ಪರಾತ್ಪರ-
ತರ ವೈಕುಂಠಪತೇ ॥ಜಯ॥ ॥ ೨ ॥

ಭಾಮಿನಿ

ದಕ್ಷಸುತೆ ಶುಭಗಾತ್ರೆ ಸಕಲ ಮು-
ಮುಕ್ಷುಜನನುತಿ ಪಾತ್ರೆ ಜಗದ-
ಧ್ಯಕ್ಷೆ ಪಂಕಜನೇತ್ರೆ ಪುಣ್ಯ ಚರಿತ್ರೆ ಸುಪವಿತ್ರೆ।
ಅಕ್ಷಯಾತ್ಮಿಕೆ ತಾಯೆ ವರನಿಟ-
ಲಾಕ್ಷರುದ್ರನ ಜಾಯೆ ನಮ್ಮನು-
ಪೇಕ್ಷಿಸದೆ ನೀ ಕಾಯೆ ಪಾರ್ವತಿ ಕೃಪೆಯೊಳನವರತ॥ ॥ ೩ ॥

ರಾಗ—ಸೌರಾಷ್ಟ್ರ; ತಾಳ-ತ್ರಿಪುಟ

ಕ್ಷೀರಸಾಗರ ರಾಜನಂದಿನಿ
ಸಾರಸೀರುಹ ಗಂಧಿನಿ।
ಭೂರಿ ಸೌಭಾಗ್ಯಪ್ರದಾಯಕಿ।
ಮೂರು ಲೋಕದ ನಾಯಕಿ।
ಜಯತು ಜಯತು ॥ ೧ ॥

ಭಕ್ತ ಜನದಾರಿದ್ರ್ಯಹಾರಿಣಿ
ಭಕ್ತಲೋಕೋದ್ಧಾರಿಣೀ
ಭಕ್ತಪರಮಾನಂದಕಾರಿಣಿ
ಭಕ್ತಹಿತಪರಿಪೂರಿಣೀ ॥ಜಯತು॥ ॥ ೨ ॥

ಸರ್ವಸದ್ಗುಣಗಣ ಸಮನ್ವಿತೆ
ಸರ್ವಸಜ್ಜನ ಸನ್ನುತೇ।
ಸರ್ವತೋಮುಖಿ ಪದ್ಮಮಂದಿರೆ
ಸರ್ವಮಾತೃಕೆ ಇಂದಿರೇ ॥ಜಯತು॥ ॥ ೩ ॥

ರಾಗ—ಸೌರಾಷ್ಟ್ರ; ತಾಳ-ಅಷ್ಟ

ರಾಜೀವಪೀಠನ ರಾಣಿ ಸರಸ್ವತಿ। ಶಾರದಾಂಬಾ
ವಿಶ್ವ। ಪೂಜಿತದೇವಿ ಸಂಪೂರ್ಣದಯಾವತಿ। ಶಾರದಾಂಬಾ ॥೧॥

ವಿದ್ಯಾಧಿದೇವತೆ ವಿಮಲಪುಸ್ತಕವಾಣಿ। ಶಾರದಾಂಬಾ
ಸರ್ವ। ಹೃದ್ಯಕಾರಿಣಿ ಶುದ್ಧ ಹೃದಯೆ ಪನ್ನಗವೇಣಿ। ಶಾರದಾಂಬಾ ॥ ೨ ॥

ನೀಲಕುಂತಲೆ ದೇವಿ ನಿತ್ಯ ಸುಮಂಗಲೆ। ಶಾರದಾಂಬಾ
ದಿವ್ಯ। ನಾಳೀಕದಳ ನೇತ್ರ ನಲಿಯೆನ್ನ ರಸನದಿ। ಶಾರದಾಂಬಾ ॥೩॥

ವಾರ್ಧಿಕ

ನೆರೆವನೆಯನಂ ಕೂಡಿ ನಷ್ಟಕರನೆನಿಸಿ ಹಿಂ
ದಿರುಕನೊಡನಾತಗಪಮಾನಗೈಸುತ ಮುಂದೆ

ಸರಿವುತಾಹೀನ ಲಕ್ಷಣವಳಿದು ದೂರದೊಳ್ ವೃದ್ಧನಾಗುತ
ಜಗದೊಳು ।
ದುರಿತಕಾರಿಯಕೆ ಪ್ರತಿಕೃತಿಯವೊಲ್ ತಿರುಗಿ ಹಿಂ
ದಿರುಕನೊಳ್ ಮಾನಹಾನಿಯನಾಂತು ಕಪ್ಪಿನೊಳ್
ನರಳುತಿರ್ಪಾತನಂ ಪೊತ್ತು ಕುಣಿವನ ಕಂದನಂ
ಮಗುಳೆ ವಂದಿಸುವೆನು ॥ ೧ ॥

ಈ ರೀತಿಯಿಂದ ಬಹುದೇವತೆಗಳಿಗೆ ನಮ-
ಸ್ಕಾರಂಗಳಂಗೈದು ವಾಲ್ಮೀಕಿ ಮುಖ್ಯ ಕವಿ-
ವೀರರಂ ಧ್ಯಾನಿಸಿ ಪಿತಾಮಹೇಂದ್ರಾದಿ ಸುರ ಸಂದೋಹಕಭಿವಂದಿಸಿ ।
ನೀರೇರುಹಪ್ರಿಯಾದ್ಯಖಿಳಗ್ರಹರ್ಗೆರಗಿ
ನಾರದಪರಾಶರಾತ್ಮಜ ಮುಖ್ಯ ಮುನಿವರರ-
ನೋರಂತೆ ನೆನೆದು ಸದ್ಭಕ್ತಿಯಿಂದಭಿನಮಿಸಿ ಸುಜ್ಞಾನಮಂ ಪಡೆವೆನು॥ ೨ ॥

**ಆಕರ**

ಭಾಮಿನಿ

ಮೆರೆವ ಹರಿವಂಶಾಖ್ಯಚರಿತದೊ-
ಳುರುಬಲಾಢ್ಯನಿಕುಂಭನನು ಸಂ
ಹರಿಸಿ ಹರಿ ನಿಜಪೌತ್ರಿಯನು ನಕುಲಾನುಜಾತನಿಗೆ ।
ಪರಿಣಯವ ಮಾಡಿಸಿದ ರೀತಿಯ-
ನರಿದು ಕ್ರಮದಲಿ ಯಕ್ಷಗಾನದೊ-
ಳೊರೆವೆ ಬಹುಲಪುರೇಶಲಿಂಗೇಶ್ವರನ ಕರುಣದಲಿ ॥

ರಾಗ—ಸೌರಾಷ್ಟ್ರ; ತಾಳ-ತ್ರಿಪುಟ

ಧರಣಿಪತಿ ಜನಮೇಜಯುಗೆ ಮುನಿ-
ವರನು ವೈಶಂಪಾಯನಾಖ್ಯನು
ದುರಿತಹರ ಹರಿವಂಶ ಚರಿತವನೊರೆಯುತಿರಲು ॥ ೧ ॥
ಋಷಿಗೆರಗಿ ಬೆಸಗೊಂಡನೆಲೆ ತಾ-
ಪಸಶಿರೋಮಣಿ ಮುನ್ನ ದನುಜ-
ದ್ವಿಷನು ದುರುಳನಿಕುಂಭನನು ಮರ್ದಿಸಿದನೆಂತು ॥ ೨ ॥

ಮಗನ ಮಗಳಹ ಭಾನುಮತಿಯನು
ಸುಗುಣನಿಧಿಸಹದೇವಕನಿಗೆ
ಜಗದೊಡೆಯನುದ್ವಾಹಗೈಸಿದ ಬಗೆಯದೆಂತು ॥ ೩ ॥

ವಿಸ್ತರಿಸಿ ಪೇಳದನು ದಯದೊಳೆ-
ನುತ್ತ ನಮಿಸಿದ ನೃಪತಿಗಾಮುನಿ
ಮತ್ತೆ ವರ್ಣಿಸತೊಡಗಿದನು ಸಮಚಿತ್ತನಾಗಿ ॥ ೪ ॥

## ಕಥಾರಂಭ

ರಾಗ—ಭೈರವಿ; ತಾಳ-ಝಂಪೆ

ಅಭಿಮನ್ಯು ಪೌತ್ರ ಕೇಳಭಿವರ್ಣಿಸುವೆ ನಿನಗೆ
ತ್ರಿಭುವನೇಶ್ವರ ಹರಿಯ ಶುಭಚರಿತ್ರವನು ॥ ೧ ॥

ವಾರಣಾಂಕಿತ ಪುರದಿ ವೀರ ಕುಂತೀಸುತರು
ಕೌರವರ ಜತೆಯೊಳಿರಲಾರದಿರೆ ಬಳಿಕ ॥ ೨ ॥

ಧರೆಯೊಳರ್ಧವ ಪಡೆದು ಪೊರಟು ಶಕ್ರಪ್ರಸ್ಥ-
ಪುರದೊಳೊಪ್ಪಿದರವರು ಪರಮಸೌಖ್ಯದೊಳು ॥ ೩ ॥

ಸತ್ಯಧರ್ಮಂಗಳನು ನಿತ್ಯದಲಿ ಬಿಡದೆ ಹರಿ-
ಭಕ್ತಿಯಿಂದಿಳೆಯನಾಳುತ್ತಿರ್ದರವರು ॥ ೪ ॥

## ಪಾಂಡವರ ಒಡ್ಡೋಲಗ

ಭಾಮಿನಿ

ಭೂಮಿಪತಿ ಕೇಳೊಂದು ದಿವಸದೊ-
ಳಾ ಮಹಾಮತಿ ಧರ್ಮತನಯನು
ಭೀಮ ಫಾಲ್ಗುನ ಮಾದ್ರಿಯಣುಗರು ದ್ರುಪದ ಸುತೆ ಸಹಿತ।
ಸ್ವಾಮಿ ಜೀಯೆನುತೆಸೆವ ಸುಭಟ-
ಸ್ತೋಮದಿಂದೋಲಗವನಿತ್ತನು
ಪ್ರೇಮದನುಜ ಧನಂಜಯನ ಮೊಗ ನೋಡುತಿಂತೆಂದ ॥

## ಧರ್ಮಜನ ಆದೇಶ

ರಾಗ—ಕೇದಾರಗೌಳ; ತಾಳ-ಅಷ್ಟ

(ಧಾಟಿ—ರಾಜಶೇಖರ ಮಹಾ। ರಾಜಧರ್ಮಜ ಕೇಳು)

ಅನುಜನೆ ಕೇಳು ನಮ್ಮನೆ ತನ್ನ ಪ್ರಾಣಂಗ-
ಳೆನುತ ಪಾಲಿಸುತಿರ್ಪನು ।
ವನರುಹನಾಭನಾತನ ನಾವು ಕಾಣದೆ
ಬಹು ದಿನ ಸಂದುದಿನ್ನು ॥ ೧ ॥

ಭರದಿಂದ ದ್ವಾರಕಾಪುರಕಾಗಿ ಪೋಗಿಯ-
ಲ್ಲಿರುವರ ಕ್ಷೇಮವನು ।
ಅರಿದು ಶ್ರೀಕೃಷ್ಣನ ಕರಕೊಂಡು ಬಾರೆಮ್ಮ
ಪುರಿಗೆ ಬೇಗದಲಿ ನೀನು ॥ ೨ ॥

ಯದುಕುಲ-ತಿಲಕನಿಷ್ಟದ ಮಿತ್ರ ನೀನೆಮ್ಮೊ-
ಳಿದು ದಿಟವಾಗಿಹುದು ।
ಅದರಿಂದ ನೀನೆ ಪೋದುದು ಹಿತವೆನೆ ಪಾರ್ಥ-

ನದಕೆ ಸಮ್ಮತಿಯಿತ್ತನು ॥ ೩ ॥
ಅಗ್ರಜಗೆರಗಿಯನುಗ್ರಹವಿರಲೆಂದು
ವಿಗ್ರಹ ವಿಜಯ ತಾನು ।
ಉಗ್ರಧನ್ವಾಧಿ ಸಮುಗ್ರ ಸಂಗ್ರಹವ ಪ-
ರಿಗ್ರಹಿಸುತಲೆದ್ದನು ॥ ೪ ॥

ವರಮಹಾರಥವೇರಿ ನರನಿಂದ್ರಸೇನ ನೆಂ ।
ದಿರುವ ಸಾರಥಿ ಸಹಿತ ।
ತರದಿಂದ ದ್ವಾರಕಾ-ಪುರಕಾಗಿ ಪೋದನು
ಹರಿಯ ನೋಡುವೆನೆನುತ ॥ ೫ ॥

## ಅರ್ಜುನ-ಕೃಷ್ಣರ ಮಿಲನ

ರಾಗ—ಮಧ್ಯಮಾವತಿ; ತಾಳ-ತ್ರಿಪುಟ

(ಧಾಟಿ—ಮಗುಳೆ ಪುರುಷೋತ್ತಮನ ಸುಪ್ಪ । ತ್ತಿಗೆಯನೇರಿಸಿ ।)

ದ್ವಾರಕಾಪುರದರಮನೆಯೊಳಸು-
ರಾರಿ ಬಂಧುಗಳೊಡನೆ ಕುಳಿತಿರೆ
ದ್ವಾರ ಪಾಲಕರೈದಿ ಪೇಳ್ದರು ಧೀರ ಪಾರ್ಥನ ಬರವನು ॥ ೧ ॥

ಹರುಷದಲಿ ತನ್ನೆಡೆಗೆ ನರನನು
ಕರೆಸಿಕೊಂಡನು ಕೃಷ್ಣನವನಡಿ-
ಗೆರೆಗಲಾತನನಪ್ಪಿ ಹರಿ ಬಹುಪರಿಯ ಸತ್ಕೃತಿಗೈದನು ॥ ೨ ॥

ವಿಮಲ ಮತಿ ಪೃಥೆ ಪಾರ್ಥಿವಾಗ್ರಣಿ
ಯಮಜ ಮೊದಲಾದವರ ಕುಶಲವ
ಕ್ರಮದೊಳಗೆ ಬೆಸಗೊಳುತ ನಿನ್ನಾಗಮನವೇನುಸುರೆಂದನು ॥೩॥

ಬಂದ ಕಾರ್ಯವೆಲ್ಲವನು ವಿಬು-
ಧೇಂದ್ರನುತನರುಹಿದರೆ ಕೇಳುತ
ಮಂದಹಾಸದೊಳಾಗ ದೇವಮುಕುಂದನೊಲಿದಿಂತೆಂದನು ॥೪॥

## ಕಾರ್ಯಪ್ರಸ್ತಾವ

ವಾರ್ಧಕ

ನರನೆ ಕೇಳ್ ವಾಜಿಮೇಧಾಧ್ವರಮ್ ಮತ್ಸುತನ
ತರಳೆಯ ವಿವಾಹವಿಂತೆರಡು ಕಾರ್ಯಂಗೈವ
ಭರದೊಳಿಹೆವೀಗ ನಿನ್ನಿಷ್ಟಮುಮ್ ಸಲಿಸಲ್ಕೆ ಸಮಯವಲ್ಲಿನ್ನು ನೀನು ।
ನೆರೆ ನಮ್ಮ ಸಾಹಚರ್ಯದೊಳಿಹುದು ಲೇಖನಮ್
ಪೊರಡುವದು ಕ್ರಮದಿಂದ ನಿಮ್ಮ ಪುರಿಗೆನೆ ಕೇಳ್ದು
ಹರಿಯ ಸುಪ್ರೇಮದುಕ್ತಿಗೆ ಪಾರ್ಥನಾನಂದದಿಂದ ಸಮ್ಮತಿಯಿತ್ತನು॥

ಕಂದಪದ್ಯ

ನರನಂ ಮನ್ನಿಸಿ ಬಳಿಕಾ
ಹರಿ ಬಾಂಧವರೊಡನೆ ಭೋಜನಾದಿಗಳಿಂದಂ।
ಪರಮಾನಂದದೊಳಿರ್ದಾ
ಮರುದಿನ ವಸುದೇವ ಮುಖ್ಯರೊಡನಿಂತೆಂದಂ॥

ರಾಗ—ಘಂಟಾರವ; ತಾಳ–ಏಕ

(ಧಾಟಿ—ಯಾಕೆ ನಮಗಾ ಮಾನಿನಿಯ ತಳ್ಳಿ। ಯೆಂಬಂತೆ)

ನುಡಿಯನಾಲಿಸಿರೆಲ್ಲರಂದಿನೊಳು
ನಾವೆಲ್ಲರೊಮ್ಮನ-
ವಿಡಿದು ನಿಶ್ಚಯಿಸಿರುವ ಕಾರ್ಯಗಳು
ನಡೆಯುತಿರಲಿನ್ನೆಂಟು ದಿನಕೀ
ಕಡೆಗೆ ಬಂದೊದಗುವೆನೆನುತ ಬಲ
ನುಡಿದು ಕಾರ್ಯಾಂತರದಿ ಗೋಕುಲ-
ದೆಡೆಗೆ ತಾನೈದಿರುವನಲ್ಲವೆ ॥ ೧ ॥

ಅದು ನಿಮಿತ್ತದೊಳಿಂದು ಮುಂದಾಗಿ। ಆ ಬ್ರಹ್ಮದತ್ತಾಂ-
ಕದ ಮಹೀಸುರನೆಡೆಗೆ ನೀವ್ ಪೋಗಿ।
ಮೊದಲು ದಿನವನು ಕೇಳಿ ತತ್ಕಾ-
ರ್ಯದಲಿ ಯತ್ನಿಪುದನಿತರೊಳಗೀ
ಸದನಕಗ್ರಜಬರುವನಾವ್ ಬಂ
ದೊದಗುವೆವು ನಿಮ್ಮಯ ಸಹಾಯಕೆ ॥ ೨ ॥

ಎಂದು ನಗಧರ ನುಡಿದ ನುಡಿಗಳನು। ಕೇಳ್ದೆಲ್ಲರಹುದಹು-
ದೆಂದು ಸಮ್ಮತಿಸಿದರು ಶೂರಜನು।
ಕಂದ ನಿನ್ನಭಿಮಂತ್ರ ಮನಕಾ-
ನಂದವಾಯಿತು ಪೊರಡುವೆವು ತಾ-
ವೆಂದು ವೇಣುಧರಂಗೆ ಪೇಳಿದು
ಕುಂದದವನನುವಾದನಾಗಲೆ ॥ ೩ ॥

ಅನಘಶೂರಜ ಭೋಜ ದಂಷ್ಟ್ರಕರು। ಉದ್ಧವನು ಸತ್ಯಕ-
ತನಯನಕ್ರೂರಾದಿ-ಪಟುಭಟರು ।
ವನಿತೆ ದೇವಕಿ ಮುಖ್ಯ ಮಹಿಳೆಯ-
ರನುಚರರು ಚತುರಂಗ ಬಲ ಮೇ-
ದಿನಿಯ ಸುರರು ಸಮೇತ ಹೊರಟರು
ವನರುಹೇಕ್ಷಣನಾಜ್ಞೆಯಿಂದಲಿ ॥ ೪ ॥

ರಾಗ—ಕಾಂಬೋಧಿ; ತಾಳ-ಝಂಪೆ

ಈ ರೀತಿಯಿಂದವರು ದ್ವಾರವತಿಯನು ಬಿಟ್ಟು
ಪಾರಿಯಾತ್ರಾಚಲದ ಕಡೆಗೆ॥
ದಾರಿಯನು ಹಿಡಿದೈದಿ ಸೇರಿದರು ಕ್ರಮದೊಳಾ
ವೀರವಿಪ್ರನ ವಸತಿಯೆಡೆಗೆ ॥ ೧ ॥

ವಂದಿಸಿದರಾಭೂಸುರೇಂದ್ರನನು ಕಂಡವರು
ಚೆಂದದಿಂದವನು ಸತ್ಕರಿಸಿ।
ಬಂದ ಕಾರಿಯವಾವುದೆಂದೆನಲು ವಸುದೇವ-
ನಂದು ನುಡಿದನು ಮುಗುಳೆ ನಮಿಸಿ ॥ ೨ ॥

ಅನಘಮತಿ ಕೇಳು ನೀ ಮುನಿಯಾಜ್ಞವಲ್ಕ್ಯಶಿ-
ಷ್ಯನು ಸರ್ವಶಾಸ್ತ್ರಕೋವಿದನು ॥
ಯೆನಗೆ ಸಹಪಾಠಿ-ಸಖನಿನಿತಿಹುದರಿಂದೊಂದ
ನೆನೆದು ನಿನ್ನೆಡೆಗೆ ಬಂದಿಹೆನು ॥ ೩ ॥

ನಿನ್ನ ಪೌರೋಹಿತ್ಯವನು ಪಡೆದೀಕಡೆಯೊ-
ಳುನ್ನತ ಸುವಾಜಿ ಮೇಧವನು ॥
ಚೆನ್ನಾಗಿ ಮಾಡಬೇಕೆನ್ನುತಿಲ್ಲಿಗೆ ಬಂದೆ-
ನೆನ್ನಲಾ ವಿಪ್ರನುಸುರಿದನು ॥ ೪ ॥

ರಾಗ—ತೋಡಿ; ತಾಳ-ತ್ರಿಪುಟ

(ಧಾಟಿ—ಕೇಳು ನೃಪ ಕೆಲವಿಹುದು ನಿನ್ನಲಿ। ಯೆಂಬಂತೆ)
ಲೇಸನಾಡಿದೆಯೊನ್ನೊಳಲೆ ಧರಣೀಶ ಕೇಳೀತೆರದಿ ನಿನ್ನಭಿ-
ಲಾಷೆಯಿರಲದಕೇನು ನಿರ್ಬಂಧ
ವಾಸುದೇವನ ಕರುಣವಿದೆ ನಮಗೇಸು ಘನವೀ ಮುಖವಿದನು ಸಂ-
ತೋಷದಲಿ ಮಾಡಿಸುವೆ ತಾನೆಂದ ॥ ೧ ॥

ವಿನುತ ಹಯಮೇಧಾಂಕದಧ್ವರವನು ಸಮಾರಂಭಿಸಲು ಕೇಳ್ವೈ
ದಿನವು ನಾಳಿನ ಚೈತ್ರಪೌರ್ಣಿಮೆಯು।
ನಿನಗೆ ನಿನ್ನನ್ವಯಕೆ ಸುಖಸಾಧನವು ತಾರಾಬಲ ಪರಿಷ್ಕೃತ-
ವೆನುತ ಸಕಲವನಾತಗರುಹಿದನು ॥ ೨ ॥

ತಿಳಿದುಕೊಂಡೆಲ್ಲವನು ಭೂಸುರತಿಲಕನಿಂದಾ ಯಾದವರು ಮುಂ
ಗೆಲಸ ಕಾವರ್ತಾತರಂಗಿಣಿಯು।
ಬಳಿಯೊಳಧ್ವರ ಶಾಲೆಗೈಸುತ ಹಲವು ಬೀಡಾರಗಳ ರಚಿಸುತ
ಕೆಲಸಗೈಯುತಲಿರ್ದರೀ ಪರಿಯ ॥ ೩ ॥

## ಸಮುದ್ರಯಾತ್ರಾಪ್ರಕರಣ

ಕಂದಪದ್ಯ

ಧರಣಿಪ ಕೇಳಿವರಿಂತಿರು-
ತಿರಲತ್ತಲ್ ದ್ವಾರಕಾಪುರದ ಭವನದೊಳಂ।
ಹರಿಗಾ ರುಕ್ಮಿಣಿ ಮುಂತಾ-
ದರಸಿಯರಭಿನಮಿಸಿ ನುಡಿದರೀಪರಿಯಿಂದಂ ॥

ರಾಗ—ತೋಡಿ; ತಾಳ-ಅಷ್ಟ

(ಧಾಟಿ—ಬಂದ ಯೋಗಿನಿಯನ್ನು ಕಾಣುತ್ತ ಮಿಥಿಲೇಂದ್ರ।)
ಜೀವಿತೇಶ್ವರನೆ ಕೇಳೀವೇಳೆಯೊಳಗೆ ವಿ-
ಭಾವಿಪರೀಪತಿಸಂಗದಿ।

ಕೇವಲ ಶೋಭೆಯಿಂದಾವರಿಸುವಳು ರ-
ಸಾವಳಯುವನಂದದಿ ॥ ೧ ॥

ವರುಷ ವರುಷಕೊನ್ಮೆ ಶರಧಿಯಾತ್ರೆಯು ಮಹ-
ತ್ತರದಿಕೌಮುದಿಯೊಳಗೆ ।
ಹರುಷದಿ ಗೈದು ವಿಹರಿಸುವ ಪದ್ಧತಿ ।
ಇರುವದಲ್ಲವೆ ನಮಗೆ ॥ ೨ ॥

ಇಂದು ನಮ್ಮಿಷ್ಟವೇನೆಂದು ಪೇಳುವದೇತ-
ಕೆಂದು ಕೈಮುಗಿಯಲಂದು ।
ಕಂದರ್ಪ ಜನಕನಿಂತೆಂದನು ಕೃಪೆಯೊಳಾ
ಸುಂದರಿಯರಿಗೊಲಿದು ॥ ೩ ॥

ತಿಳಿದೆ ನಿಮ್ಮಿಷ್ಟವ ಸಲಿಸುವೆನೀದಿನ
ಬೆಳುದಿಂಗಳೊಳಗೆನ್ನುತ ।
ತಿಳುಹಿ ತತ್ಕಾರ್ಯಕೆಂದೊಲಿದನುಗೈದನು ।
ಬಲವೈರಿಸುತಸಹಿತ ॥ ೪ ॥

ಭವನ ರಕ್ಷಣೆಗೆ ವಿಕದ್ರುವನುಗ್ರನೆಂ
ಬವನ ನೇಮಿಸಿ ಕೃಷ್ಣನು ।
ರವಿಯಸ್ತಮಿಸಲು ಯಾದವರನೆಲ್ಲರ ಕೂಡಿ ।
ತವಕದಿ ಪೊರಮಟ್ಟನು ॥ ೫ ॥

ಹರಿಸುತ ಭಾನುವಿನುರುವ ಕನ್ಯಾಪುರ
ಮೆರೆವುದುದ್ಯಾನದಲ್ಲಿ ।
ನೆರೆ ಭಾನುಮತಿಯಲ್ಲಿ ಪೊರಡದಿದ್ದಳು ಸಹ-
ಚರಿಯರ ಕೇಳಿಯಲ್ಲಿ ॥ ೬ ॥

ವಾರ್ಧಕ

ದೇವಿ ರುಕ್ಮಿಣಿ ಮುಖ್ಯ ದೇವಿಯರ ವೃಂದದಿಂ
ದೇವಕೀಸುತನುಳಿದ ಭಾವಜಾದ್ಯರ್ ತಮ್ಮ
ಜೀವಿತಸ್ತ್ರೀಯರಿಂ ತೀವಿದರ್ ಗಣಿಕೆಯರ ಸಾವಿರಂ ಸಂದಣಿಸಿತು ।

ದೇವದುಂದುಭಿಯಾಪ್ರಭಾವವೆನೆ ಮೊಳಗಿತು ಮ
ಹಾವಾದ್ಯದುತ್ಕಟ ವಿರಾವವೊಲವಿಂದ ಪಾ-
ರಾವಾರಯಾತ್ರೆಗೆ ವಿಭಾವರಿಯೊಳೈದಿದರದೇವೇಳ್ವೆನ್ ಅಚ್ಚರಿಯನು ॥ ೧ ॥

ಸುಳಿದೇಳ್ವಗಾಳಿಯಿಂದುರುಬುದ್ಬುದಾಳಿಯಿಂ
ಹೊಳೆವ ಕಲ್ಲೋಲಗಳ ವಿಪರಿಮಿತ ಶಾಲಗಳ
ಚಲಿಪ ಕುಂಭೀರಗಳ ಘನಶಿಂಶುಮಾರಗಳ ಮಂದಿರಮಿದೆಂದಖಿಳರು ।
ತಿಳಿಯೆ ಶೋಭಿತಮಾಗಿ ಬಹುಘೋಷಯುತಮಾಗಿ
ಸಲೆ ವಿಪುಲಫೇನಸಂಭೃತಮಾಗಿ ಮೀನಸಂ
ಕುಲ ಸಮಾಕರಮಾಗಿ।ಧರೆಗೆ ಭೀಕರಮಾಗಿ ಜಲಧಿ ಕಂಗೊಳಿಸಿರ್ದುದು॥೨॥

ರಾಗ— ಮಧ್ಯಮಾವತಿ; ತಾಳ-ತ್ರಿಪುಟ

(ಧಾಟಿ— ಪಾಲಯ ಮೃದುಭಾಷಣ— ಎಂಬಂತೆ)

ಜಲ ಕೇಳಿಯಾಡಿದರು । ಯಾದವರೆಲ್ಲ। ಜಲಕೇಳಿಯಾಡಿದರು ॥ಪ॥

ಸತಿಯರು ಪತಿಗಳೊಳು ॥ ಬೆರೆತು ಜತೆ
ಜತೆಯಾಗಿ ತಂತಮ್ಮೊಳು ॥
ಅತಿ ಹರುಷದಲಿ ಹಿಗ್ಗುತ ಸರಸೋಕ್ತಿಯಾ-
ಡುತ ನಸುನಗುತ ನಿಲ್ಲುತ ಕೈಯ ಬೊಗಸೆಯೊಳ್ ॥
ಸತಿ ಪತಿಗೆ ಪತಿ ಸತಿಗೆ ನೀರೆರ-
ಚುತ ಮುಖಾಂಬುಜ ಕೇಳ್ವ ಸಮಯದ
ಮಿತಿಯನುಸಿರುತ ಮುಳುಗುತೇಳುತ
ನುತಿಸಿ ನಿಂದಿಸಿಕೊಳುತ ನಲಿಯುತ ॥ ೧ ॥

ನಳಿನಾಕ್ಷನಾಜ್ಞೆಯೊಳು । ನಾವೆಗಳಲ್ಲಿ । ಹೊಳೆದವನೇಕಗಳು ॥
ಕೆಲರು ಧೀವರ ವೇಷಗಳಲೊತ್ತಿ ಹಾಯ್ಸುತ
ಕೆಲವರಾನಾವೆಗಳೊಳಗೇರಿ ನಲಿಯುತ್ತ ॥
ಲಲನೆಯರು ದನಿದೋರಿ ಪಾಡುತ

ಘುಳುಘುಳಿಪ ಕಲ್ಲೋಲವಾರಿಯ
ಸುಳಿಗಳಲಿ ದುಮ್ಮಿಕ್ಕಿ ಅಲ್ಲಿಯೆ
ಮುಳುಗುತಿನ್ನೊಂದೆಡೆಯೊಳೇಳುತ್ತ ॥ ೨ ॥

ಶರಧಿಯೊಳಿಂತವರು । ಕ್ರೀಡಿಸಿ ಪರಿ। ಪರಿಯಿಂದ ಬಳಿಕೆಲ್ಲರು ।
ಹರುಷದಿ ಮಡಿವಸ್ತ್ರಾಭರಣ ಸುಗಂಧಕ-
ಸ್ತುರಿಗಳಿಂದೊಲಿದು ಶೃಂಗರಿಸಿಕೊಂಡಮಲ ಕ-
ರ್ಪುರದ ವೀಳ್ಯವ ಸವಿದು ರೈವತ-
ಗಿರಿಗೆ ಸಾರಿದು ನೃತ್ಯಗಾಯನ
ಮುರಜ-ತಾಳ-ಮೃದಂಗ ತಾಡನ-
ಭರದ ಕಾರ್ಯಗಳಿಂದ ನಲಿದರು ॥ ೩ ॥

## ವೈರಬೀಜ

ವಾರ್ಧಕ

ಅರಸ ಕೇಳ್ ಪಾರಿಯಾತ್ರದ ಬಳಿಯೊಳೆಸೆವ ಷಟ್-
ಪುರನಾಮದುರ್ಗದೊಳ್ ಗಾಂಧರ್ವರೂಪದಿಂ
ದಿರುತಿಹ ನಿಕುಂಭಾಸುರಂ ಸಹೋದರ ವಜ್ರನಾಭನಂ ಪ್ರದ್ಯುಮ್ನನು ।
ಮುರಿದವನ ಸುತೆ ಪ್ರಭಾವತಿಯನುಂ ತಂದವನ
ವರವಜ್ರನಗರಮಂ ಸ್ವಾಧೀನಗೈದು ಕೊಂ
ಡಿರುವನಿದಕಚ್ಯುತನೆ ಮೂಲವೆಂದವನ ವೈರವನೆ ಸಾಧಿಸುತಿರ್ದನು ॥

ಭಾಮಿನಿ

ಯದುಕುಲದ ಕನ್ನೆಯನು ತಂದಾ
ಪದುಮಲೋಚನಮದನಮುಖ್ಯರ
ಸದೆಬಡಿವ ಬಗೆಗಾಗಿ ಬೇಹಿನ ಚಾರರನಟ್ಟಿರಲು ।
ಯದುಕುಟುಂಬದ ಗೂಢವಿಷಯದ
ಹದನವೆಲ್ಲವನೈದೆ ತಿಳಿದವ-
ರೊದಗಿ ಷಟ್ಪುರಕೈದಿ ಪೇಳ್ದರು ಖಲನಿಕುಂಭನಿಗೆ॥

ರಾಗ—ಮುಖಾರಿ; ತಾಳ-ಏಕ

(ಧಾಟಿ—ಲಾಲಿಸಿ ಕೇಳಿಂದ್ರ ಸಂಜಾತ ಆಲಸ್ಯಮಾಡದೇಳು ಸಂಗರಕೆ)

ಅಸುರೇಂದ್ರ ಲಾಲಿಸೆಮ್ಮ ನುಡಿಯ , ಪ್ರೀತಿಯೊಳೆಮ್ಮೊಡೆಯ ।
ಅಸುರೇಂದ್ರ ಲಾಲಿಸೆಮ್ಮನುಡಿಯ ॥ ಪ ॥
ದೊರೆಯೇ ನಿನ್ನಾಜ್ಞೆಯನ್ನು ಪಡೆದು । ಊರೂರುಗಳನು ।
ತಿರುಗುತ್ತ ಮುಂದೆ ಮುಂದೆ ನಡೆದು ॥
ಪುರ-ವನ-ನದಿ-ನದ- ಗಿರಿ-ಗುಹೆ-ಗಣಿ-ಗ
ಹ್ವರಗಳನೆಲ್ಲವ ಪರಿಕಿಸುತಲ್ಲ-
ಲ್ಲಿರದೆ ಮಹಾಜಾಗರತೆಯೊಳೊದಗುತ
ಕೊರತೆಗೊಳದೆ ಬಹು ಪರಿಯಲಿ ದಣಿದೆವು ॥ ೧ ॥

ಮೊದಲೇ ಯಾದವರ ಮೇಲೆ ಧೀರ । ಮಾಗಧ-ಕಾಳಿಂಗ ।
ಮೊದಲಾದ ನೃಪರಿಗೆಲ್ಲಾ ವೈರ ॥
ಉದಿಸಿ ಬೆಳೆವುದೆಂಬುದನರಿವುತ ದುರ್-
ಮದಯಾದವಪುರಕೊದಗಿದೆವಲ್ಲಿರು-
ವಥಮರು ಬಹುಸಂಖ್ಯದೊಳಾವರ್ತಾ
ನದಿಯೆಡೆಗೈದಿಹರಿದನೀಕ್ಷಿಸಿದೆವು ॥ ೨ ॥

ದಡಿಗರು ಮತ್ತೆ ಕೆಲರು ಜೀಯ । ನಾರಿಯರ ಸಹಿತ ।
ಜಡಧಿಯೊಳಾಡುತಿರ್ದರಯ್ಯ ॥
ಅಡವಿಯೊಳೊಂದಿದೆ ಬಡಮನೆಯದರೊಳು
ಹುಡುಗಿಯರಿಹರುಗ್ಗಡಿಸುವ ಪುರುಷರ
ತಡೆಯಿರದೊಬ್ಬಳ ಬೆಡಗತಿಶಯ ಪೊರ-
ಮಡು ನೀನಾಕೆಯ ಹಿಡಿತಹ ಕಾರ್ಯಕೆ ॥ ೩ ॥

## ನಿಕುಂಭ-ನಿರ್ಧಾರ

ರಾಗ-ಸೌರಾಷ್ಟ್ರ ; ತಾಳ—ತ್ರಿಪುಟ

ಚರರ ನುಡಿಯನು ಕೇಳುತಲೆ ನಿ-
ಷ್ಠುರಬಲಾಢ್ಯ ನಿಕುಂಭನೆದ್ದನು
ಹರುಷದಿಂದುಬ್ಬೇರಿ ಮಿಾಸೆಯ ತಿರುಹುತಾಗ ॥ ೧ ॥

ಭಳಿ ಭಳಿರೆ ಚಾರಕರೆ ನಿಮ್ಮನು
ಕಳುಹಿದುದು ಸಾಫಲ್ಯವಾಯಿತು
ಹಲವು ಮಾತಿಂದೇನು ಮೆಚ್ಚಿದೆನೊಲಿದೆ ನಿಮಗೆ ॥ ೨ ॥

ಈಗಲೇ ಯದುರಾಜ ಪುರದೆಡೆ-
ಗಾಗಿ ನಡೆವಾ ನಾಗವೇಣಿಯ
ತಾಗಿ ಹಿಡಿದೆಳತರುವೆನಿಲ್ಲಿಗೆ ಬೇಗದಿಂದ ॥ ೩ ॥

ಬಳಿಕ ಬಲಸಹಿತೈದಿ ರಿಪುಗಳ
ಪೊಳಲ ಸೂರೆಯಗೊಂಡು ಯಾದವ-
ಬಲವ ಬಡಿದಪ್ಪಳಿಸಿ ಕೊಲುವೆನು ಕಲಿತನದೊಳು ॥ ೪ ॥

ದ್ವಿವಿದವಾನರನೆಮಗೆ ಸಖನಾ-
ದವನು ನಾಗಾಯುತಬಲನು ಬರಿ-
ಸುವೆನು ನಮ್ಮ ಸಹಾಯಕಾತನ ಜವದೊಳೆಂದ ॥ ೫ ॥

## ಭಾನುಮತಿಯ ಅಪಹಾರ

ರಾಗ—ಸಾಂಗತ್ಯ ; ತಾಳ–ರೂಪಕ

ಅರಸ ಕೇಳ್ ಬಳಿಕ ವಾನರನು ಸಹಾಯಕ್ಕೆ
ಬರುವಂತೆ ಪೇಳ್ವ ವಾಕ್ಯವನು ।
ಅರುಹಿ ಚಾರಕರನ್ನು ತೆರಳಿಸಿ ಭರದಿಂದ
ಪೊರಟನೇನೆಂಬೆನಾ ಖಲನು ॥ ೧ ॥

ಅನುಚರರೊಡಗೊಂಡು ದನುಜನೈದಿದ ಗಿರಿ
ವನಗಳ ಕಳೆದರಣ್ಯದಲಿ ।
ಮಿನುಗುವ ಕೃಷ್ಣನಂದನ ಭಾನುವಿನ ಕನ್ಯಾ
ಜನದ ಮಂದಿರಕೊಲವಿನಲಿ ॥ ೨ ॥

ಭಾನುನಂದನೆಯು ಸುಮ್ಮಾನದಿ ಮಿಗೆಮುಂದ-
ಯೂನೆಯರೊಡನೆಸೆದಿರಲು ॥

ದಾನವಪತಿಯಂತರ್ಧಾನದೊಳಿರ್ದು ತಾನ್
ಆ ನಿತಂಬಿನಿಯ ನೋಡಿದನು ‖ ೩ ‖

ತರುಣಿಯ ರೂಪಸಂದರುಶನಮಾತ್ರದಿ
ಜರಿದುದು ಖಳನ ದುರ್ಮದವು ॥
ಸ್ಮರಶರ ಹತಿಯಿಂದ ಕರಗಿ ಕಂಗೆಡುತಾಗ
ಮರುಳುಗೊಂಡಿಂತೆಂದನವನು ॥ ೪ ॥

ರಾಗ—ಯಮುನಾಕಲ್ಯಾಣಿ ; ತಾಳ—ಆದಿ

ಅಹಹಾ ಇನ್ನೆಂಥ ಸುಂದರಿಯೀಕೆ। ನೋಡೆ
ಮಹಿಯೊಳಿಲ್ಲಿಂಥ ಚೆಲುವಿನಾಕೆ ॥ ಪ ॥

ಶರದಿಂದು-ಬಿಂಬವೊ ತಾವರೆಯೋ। ಮತ್ತೀ
ತರುಣಿಯ ವದನಮಂಡಲ ಸಿರಿಯೋ ।
ಸ್ಮರನ ಸಾಯಕವೊ ಯಾದವ ಸುತೆಯ। ರೂಪ-
ದಿರವೊ ಪೇಳುವರಾರು ನಿಜಗತಿಯ ॥ ೧ ॥

ಸಾರಸಭವನ ಗಂಗಾಧರನಗೋತ್ರ-
ವೈರಿಯ ಸರಸಿರುಹೋದರನ ।
ನಾರಿಯರ್ಗಿವಳ ಲಕ್ಷಣವಿಲ್ಲ। ವೆಂದು
ತೋರುವದೆನಗಿದು ಸಟೆಯಲ್ಲ ॥ ೨ ॥

ಇವಳಂಗ ಸಂಗಸೌಖ್ಯವ ನಾನು । ಅನು-
ಭವಿಸಿದೆನಾದರೆ ಬಳಿಕಿನ್ನು ‖
ಭುವನಮೂರರೊಳೆನಗೆಣೆಯಿಲ್ಲ। ಗೌರೀ-
ಧವನಾಣೆಯೀಮಾತು ಪುಸಿಯಲ್ಲ ‖ ೩ ‖

ಕಂದ ಪದ್ಯ

ಖಲನೀರೀತಿಯೊಳಾ ಸಿರ್-
ಮಲೆಯರ ಹಲವಂಗದಿಂದ ವರ್ಣಿಸುತಾಗಳ್ ।

ನಿಲಲಾರದೆ ತವಕದೊಳಾ
ಜಲಜಾಕ್ಷಿಯ ಮುಂದೆ ನಿಂದು ತಾನಿಂತೆಂದಂ ॥

ರಾಗ—ಕಾಂಬೋಧಿ ; ತಾಳ—ಝಂಪೆ

ನಾರೀಶಿರೋಮಣಿಯೆ ನೀರೇ ಭಾಮಾಮಣಿಯೆ
ಮಾರನರಗಿಣಿಯೇ ಕೇಳೆನಗೆ ।
ಮೂರುಲೋಕದ ಸುಭಟವಾರದೊಳಗಿದಿರಿಲ್ಲ
ಕಾರಣವನೊರೆವೆ ಕೇಳ್ ನಿನಗೆ ॥ ೧ ॥

ಶರಜಸಂಭವನಿತ್ತ ವರದಲಾರಿಂದಲೂ
ಮರಣವೆನಗಿಲ್ಲವೆಲ್ಲರನು ।
ಧುರದಿ ಗೆಲಿದವನೆನ್ನನರಿದುಕೋ ಧೀರಷಟ್-
ಪುರಪತಿ ನಿಕುಂಭನಾಗಿಹೆನು ॥ ೨ ॥

ಮದುವೆಯಾಗಿಲ್ಲ ನಿನಗದರಿಂದ ನೀನೆನ್ನ
ಪದವನಾಶ್ರಯಿಸು ಯಾದವರು ।
ಮೊದಲೆ ಸಮ್ಮತಿಸಿರ್ಪರಿದು ನಿಜವು ಮಾತಾಡು ।
ಪದುಮಮುಖಿ ನೀನೆಂದನವನು ॥ ೩ ॥

ಭಾಮಿನಿ

ಮಾನವಾಧೀಶ್ವರನೆ ಕೇಳಾ
ಭಾನುಮತಿಯಾಲಿಸುತಲಿದ್ದಳು
ಧಾನವನ ಮಾತುಗಳ ನುಡಿದಳು ಮನದೊಳೀ ಖಳನು ।
ಮಾನಗೇಡಿ ಮದಾಂಧ ಮಗುಳ-
ಜ್ಞಾನಿಯಿವನೆನ್ನೊಳಾವನರಿಯನು
ತಾನು ವಿವರಿಸಿ ಪೇಳ್ವೆನೆನುತಿಂತೆಂದಳಾತನಿಗೆ ॥

ರಾಗ—ಸುರಟಿ ; ತಾಳ-ರೂಪಕ

(ಧಾಟಿ—ಯಾಕೆ ಪೇಳ್ವೆಯಿಂತು ಬರಿದೆ। ಸಾಕು ಮುನಿಪನೇ।)
ಯಾತಕಾಗಿ ಪೇಳ್ವೆಯಿಂಥ ಮಾತನೆನ್ನೊಳು ।
ನೀತಿಯಿಲ್ಲ ತಿಳಿದು ನೋಡು ದೈತ್ಯ ನಿನ್ನೊಳು ॥ ಪ ॥

ದಾನವರಲಿ ದುರುಳನಾಗಿ ನೀನು ಬಾಳುವೆ ।
ಮಾನವರಲಿ ಸಾಧ್ವಿನಾನದೇನ ಪೇಳುವೆ ॥
ಸಾನುರಾಗಬಂಧಕಿದು ಸಮಾನವಲ್ಲವು
ಈ ನಿಧಾನವನ್ನು ನೀನು ಧ್ಯಾನಿಸಿಲ್ಲವು ॥ ೧ ॥

ನಿನಗೆ ಯದುಗಳೆನ್ನನೀವರೆನುತ ಸಟೆಯನು ।
ಎನಗೆ ಪೇಳ್ದಿಯಲ್ಲ ನಿನ್ನ ಮನವನರಿತೆನು ॥
ದನುಜಹರನು ಕೊಲುವ ನಿನ್ನನೆನುತ ತಿಳಿದುಕೋ ।.
ತನುವಿನಾಶೆಯಿರಲು ಬೇಗ ಮನೆಯ ಸೇರಿಕೋ ॥ ೨ ॥

ರಾಗ—ತೋಡಿ ; ತಾಳ—ಏಕ

(ಧಾಟಿ—ಮರುಳುದ್ವಾರಪಾಲಕರಿರ। ಕುರುಡರೇ ನೀವೆಲ್ಲ ।)
ಎಂದೊಡೆಂದನಸುರನೆಲೆಗೆ ಮಂದಮತಿಯೆ ಎನಗೆ ।
ನಿಂದೆಗೈದೆಯಾದರೂ ಕೇಳೊಂದನೊರೆವೆ ನಿನಗೆ ॥
ಅಂದದಿಂದಲೆನ್ನ ನೀನು ಹೊಂದದಿರಲು ಮುಳಿದು ।
ಒಂದೇ ಭರದೊಳೊಯ್ವೆನಿನ್ನ ಮುಂದಲೆಯನು ಹಿಡಿದು ॥ ೧ ॥

ಬಿಡುಬಿಡೇತಕಿಂಥಾಮಾತ ನುಡಿವೆಯಕಟ ಎನ್ನ ।
ಮುಡಿಗೆ ಕೈಯಿಕ್ಕಿದರೆ ಕೇಳು ಕೆಡುವೆ ನೀನು ಮುನ್ನ ॥
ಜಡಜವದನೆ ಜಾನಕಿಯನು ತುಡುಕಿ ದಶಕಂಧರನು ।
ಮಡಿದ ಕಥೆಯ ಸ್ಮರಿಸಿಕೊಂಡು ನಡೆಯೊ ಮನೆಗೆ ನೀನು ॥ ೨ ॥

ಅರರೆ ಪೂರ್ವಾಪರವನರಿಯದೊರೆವೆಯೇನೋ ಎಣಿಸಿ ।
ತರಣಿ ಕುಲಜರಾಮನಿಂಗೆ ತರುಣಿ ಸೀತೆಯರಸಿ ॥

ಮರುಳೆ ನೀನದಾವನರಸಿಯರುಹೆ ನಿನ್ನ ಕಥೆಯ ।
ಬರಿದೆ ಮಾತನಾಡಿಯೆನಗೆ ಬರಿಸಬೇಡ ಖತಿಯ ॥ ೩ ॥

ಒಲಿದು ಬಾರದಿರ್ದ ವಧುವನೆಳೆವುದೇ ಪಾತಕವು ।
ಬಲುಮೆಯಿಂದ ಬಾಧಿಸುವುದರೊಳಗಿನ್ನಾವ ಸುಖವು ॥
ಖಲನು ನೀನು ನಿನಗೆ ನಾನು ಸಿಲುಕುವಾಕೆಯಲ್ಲ ।
ಹಲವು ಮಾತಿನ್ನೇಕೆ ಪೋಗು ಚಳಕದಿಂದ ಖುಲ್ಲ ॥ ೪ ॥

ರಾಗ—ಶಂಕರಾಭರಣ; ತಾಳ—ಮಟ್ಟೆ

ತರುಣಿಯೆಂದ ನುಡಿಯ ಕೇಳಿ ಕೆರಳಿ ದನುಜನು
ಅರಿಯದೆನ್ನ ಬಲವನಿಂತು ಜರೆದೆ ನಿನ್ನನು ।
ಭರದೊಳೆಳೆದುಕೊಂಡು ಪೋಪೆ ಪರಿಕಿಸೆನುತಲೇ
ಶರಜಮುಖಿಯ ಮುಡಿಯ ಪಿಡಿದ ದುರುಳನಾಗಲೇ ॥ ೧ ॥

ಎಡದ ಬಲದ ಸಖಿಯರಕಟ ಬಿಡುಬಿಡೆನ್ನುತ
ತಡೆದು ಸುತ್ತಮುತ್ತಿ ಬೊಬ್ಬೆಯಿಡಲು ಕಾಣುತ ।
ತಡೆಯದವರನಸುರಕುಲದ ಮಾಯೆಯಿಂದಲೇ
ಕೆಡಹಿ ಮೋಹಗೊಳಿಸಿದನು ನಿಕುಂಭನಾಗಲೇ ॥ ೨ ॥

ಭಾನುತನುಜೆಯವನ ಕೈಯನುರುಬಿ ತುರುಬನು
ತಾನು ಬಿಡಿಸಿಕೊಂಡು ಹಾಯ್ದಳೊಂದುಕಡೆಯನು ।
ದಾನವೇಂದ್ರನೆಲೆಗೆ ಚಪಲೆ ಎತ್ತಲೋಡುವೇ
ತಾನು ಬಿಡೆನು ನಿನ್ನ ಬಲವನೆಲ್ಲ ನೋಡುವೆ ॥ ೩ ॥

ಎನುತಲವಳ ಬೆನ್ನಿಗೋಡಿಹೋಗಿ ಹಿಡಿಯಲು
ವನಿತೆಯಕಟ ಕೆಟ್ಟೆನೆಂದು ಕಡೆಗೆ ಧೃತಿಯೊಳು ।
ದನುಜನೊಡನೆ ಭಟರತೆರದೊಳೊದರುತಳುಕದೆ
ಮುನಿದು ಹೆಣಗುತಿರ್ದಳವನ ಕೈಗೆ ಸಿಲುಕದೆ ॥ ೪ ॥

ಮತ್ತೆ ಮೇಲುವಾಯ್ದನಾತನವಳ ಹಿಡಿಯಲು
ಹೊತ್ತ ಖತಿಯೊಳಾಕೆಯಾತನೆದೆಯೊಳೊದೆಯಲು ।

ದೈತ್ಯನಧಿಕರೋಷದಿಂದಲವಳ ತುರುಬನು
ಒತ್ತಿಹಿಡಿದು ಭರದೊಳೆಳೆದುಕೊಂಡು ಹೋದನು ॥ ೫ ॥

ವಾರ್ಧಕ

ಭೂರಮಣ ಲಾಲಿಸೈ ಖಳನಿಕುಂಭಾಸುರಂ
ಘೋರತರ ಕಾಂತಾರದೊಳ್ ಸತ್ಯಭಾಮಾಕು-
ಮಾರಕನ ಮಗಳನೆಳೆದೊಯ್ದನತಿಭರದಿಂದ ಷಟ್ಪುರದ ಮಾರ್ಗವಿಡಿದು ।
ಹಾ ರಾಮ ಹಾ ಕೃಷ್ಣ ಹಾ ಭಾನುದೇವ ಹಾ
ಮಾರ ರಕ್ಷಿಸು ರಕ್ಷಿಸಕಟಕಟ ಕೆಟ್ಟೆನೀ
ಕ್ರೂರದಾನವನ ಕೈಯೊಳಗೆನುತ ಭಾನುಮತಿ ಮೊರೆಯಿಟ್ಟಳೇವೇಳ್ವೆನು ॥

ರಾಗ—ಸಾಂಗತ್ಯ; ತಾಳ—ರೂಪಕ

ಹರಹರ ಶಿವನೆ ಶಂಕರನೆ ಈತನ ಕೈಗೆ
ಕುರಿಯಂತೆ ಸಿಕ್ಕಿದೆನೀಗ ।
ಕರುಣಿಗಳೆನ್ನನೀ ದುರುಳ ರಕ್ಕಸನ ಕೈ-
ಸೆರೆಯಿಂದ ಬಿಡಿಸಿರಿ ಬೇಗ ॥ ೧ ॥

ನಾರೀಜನ್ಮವೆ ದುಃಖ ಘೋರದಾನವನ ಕೈ
ಸೇರುವುದತಿದುಃಖವೆನಗೆ ।
ಈ ರೀತಿಯಾಯ್ತೀ ವಿಚಾರವ ಪೇಳ್ವವ
ರಾರಿಲ್ಲದಾಯ್ತೆನ್ನವರಿಗೆ ॥ ೨ ॥

ಯದುಕುಲದೊಳಗುದಿಸಿದ ಭಾನುವಿನ ಪುತ್ರಿ
ಪದುಮನಾಭನ ಪೌತ್ರಿಯಾಗಿ ।
ಪದುಳದೊಳಿರ್ದೆನೀ ವಿಧಿಯೆನಗಿಂತು ಗೈ-
ದುದು ನಿಶೆಯೊಳು ಹಗೆಯಾಗಿ ॥ ೩ ॥

ಹರಿಯೆ ನೀನಖಿಳವನರಿವ ಮಹಾತ್ಮನೀ
ಸುರವೈರಿಯೆನ್ನನೊಯ್ಯುವದನು ।
ಅರಿಯದಾದೆಯ ಎನ್ನ ಮರೆದೆಯ ? ಹಾಯೆಂದು
ಹರಿಣಾಕ್ಷಿ ಹಲುಬುತ್ತೈದಿದಳು ॥ ೪ ॥

## ಭಾನುಮತಿಯನ್ನು ಬಿಡಿಸಿ ತರುವ ಪ್ರಯತ್ನ

### ಕಂದಪದ್ಯ

ಆ ಸುಂದರಿಯಂ ಖಳನೊ-
ಯ್ವಾಸಮಯದೊಳಂಜಿ ದೂರವೋಡಿದ ವಧುಗಳ್ ।
ವಾಸವಸುತ ಮದನರೊಳು ವಿ-
ಲಾಸದೊಳಿಹ ಹರಿಗೆ ಪೋಗಿ ಪೇಳಿದರಳುತಂ ॥

### ರಾಗ—ತೋಡಿ; ತಾಳ—ಅಷ್ಟ

ಹರಿಯೆ ಲಾಲಿಸು ಕನ್ಯಾಪುರದಲ್ಲಿ ಸಖಿಯರ
ಸರಸಸಲ್ಲಾಪದೊಳು ।
ನೆರೆಭಾನುಮತಿಯಿರುತಿರುವಾಗ ಬಂದನ-
ಬ್ಬರದೊಬ್ಬ ಗಂಧರ್ವನು ॥ ೧ ॥

ಬಂದು ನಾನಾಪರಿಯಿಂದ ಮಾತಾಡುತ್ತ
ಸುಂದರೀಮಣಿಯನಿಂದು ।
ಮುಂದಲೆವಿಡಿದೆಳೆವಂದವ ಕಂಡಂಜಿ
ಬಂದೆವೆಂದುಸುರಿದರು ॥ ೨ ॥

ಕೇಳಿದಾಕ್ಷಣ ಸಿರಿಲೋಲನೆದ್ದನು ಸುರ-
ಪಾಲಜ-ಸ್ಮರಸಹಿತ ।
ಖೂಳ ಗಂಧರ್ವನ ಸೀಳಿ ರಕ್ಷಿಪೆವೆಮ್ಮ
ನೀಲಾಳಕೆಯನೆನುತ ॥ ೩ ॥

ಬರುವನಿತರೊಳಾ ಸುಂದರಿಯನಾ ದನುಜನೊ-
ಯ್ದಿರಲು ತನ್ಮಾರ್ಗವನು ।
ಅರಿತು ಸೋವಿನಲಿ ಮುಂಬರಿದು ಹಾಯ್ದರು ಧನು-
ಶರವಿಡಿದಾ ಮೂವರು ॥ ೪ ॥

## ನಿಕುಂಭನೊಡನೆ ಕೃಷ್ಣಾರ್ಜುನ ಮನ್ಮಥರ ಕಾಳಗ

ರಾಗ—ಘಂಟಾರವ ; ತಾಳ—ಅಷ್ಟ

ಎಲ್ಲಿಗೈದುವೆ! ಕಳ್ಳಗಂಧರ್ವನೀ
ಫುಲ್ಲನೇತ್ರೆಯನಿಲ್ಲಿ ಬಿಡುಬಿಡು
ನಿಲ್ಲು ಪೋಗದಿರೆನ್ನುತ ॥
ಅಲ್ಲಿ ಕೇಳ್ವುದು । ಇಲ್ಲಿ ಕೇಳ್ವುದು ಶೋಕ-
ವಲ್ಲವೀಕಡೆಗಿಲ್ಲೆನುತ ಜವ-
ದಲ್ಲಿ ಮೂವರು ಹಾಯ್ದರು ॥ ೧ ॥

ಎಷ್ಟುದೂರವೋಡಿದರೂ ದಾನವನು ಮ-
ತ್ತಷ್ಟುದೂರಕೆ ದಿಟ್ಟರಿಗೆ ಬೆಂ
ಗೊಟ್ಟು ಪೋಗಲು ಥಟ್ಟನೆ ॥
ದೃಷ್ಟಿಗೋಚರವಾಗದಿರಲು ಚಿಂತೆ-
ಬಟ್ಟು ದನುಜ ಘರಟ್ಟನುರೆಮನ-
ಮುಟ್ಟ ಗರುಡನ ನೆನೆದನು ॥ ೨ ॥

ರಾಗ—ಮಾರವಿ; ತಾಳ—ಏಕ

(ಧಾಟಿ—ಎಂದ ನುಡಿಯ ಕೇಳ್ದಂದದಿ ಪಾರ್ಥನು)

ಧರಣಿಪ ಕೇಳಾ ಗರುಡನು ಬೇಗದಿ
ಬರಲಾತನ ಹರಿ-ನರ-ಮನ್ಮಥರತಿ
ಭರದಿಂದೇರಿದರುರಗ ದ್ವಿಷನಂ
ಬರದಲಿ ಹಾಯ್ದನು ಮರುತಗತಿಯೊಳು ॥ಏನನೆಂಬೆ ॥ ೧ ॥

ಅತ್ತ ನಿಕುಂಭ ವಿಯತ್ತಲದಲಿ ಹರಿ
ಪುತ್ರನ ಪ್ರೇಮದ ಪುತ್ರಿಯ ತಲೆವಿಡಿ-
ದೊತ್ತಾಯದೊಳೊಯ್ಯುತ್ತಿರ್ದನು ನಿಜ
ಪತ್ತನಕೆನುತ ಮಹತ್ತರ ಜವದಿ ॥ ಏನನೆಂಬೆ ॥ ೨ ॥

ದುರುಳ ನಿಕುಂಭಾಸುರನವನೆಂದವ-
ರರಿದರು ಕಂಡಾ ತರುಣಿಗೆ ಧೈರ್ಯವ-
ನೊರೆಯುತವಗೆ ಘಡ ಕಿರುಕುಳ ಖಳ ಬಿಡು
ತರಳೆಯನೆನುತೆಚ್ಚರು ಶರಗಳನು ||ಏನನೆಂಬೆ || ೩ ||

ವಾರ್ಧಕ

ಅವನಿಪತಿ ಕೇಳು ಬಳಿಕವನಂದು ಚಿತ್ರಕೇ-
ತುವಿಗಿಭಸಹಸ್ರಬಲದವಳುದಿಸೆ ಹೇತುವಾ-
ದವನೋರ್ವನಿಳೆಗೆ ಶಾಪವನಿತ್ತ ಸತಿಯಗ್ರ-ಭವೆಯನಾಂತವನೋರ್ವನು ।
ಕವಿಯುಪ್ವೆಯಂ ಮಥಿಸಿದವನೋರ್ವನಿಂತಿವರ್
ಭುವನದೊಳ್ ಗಣ್ಯರುಳಿದವರ ಭಯವೇನೆಂದು
ತವಕದಿಂ ಬೆನ್ನಿಗಾ ಕುವರಿಯಂ ಬಿಗಿದು ಕೊಂಡವರ ಧುರಕಿದಿರಾದನು ||

ಕಂದಪದ್ಯ

ದಾನವನಂ ಕಾಣುತಲಾ
ಮಾನಧ್ವಜನವರೊಳೊದಗಿ ಮುಂದಾಗುತ್ತಂ ।
ತಾ ನಿಜಧನ್ವದೊಳಸ್ತ್ರವ-
ನಾನಿಸಿಕೊಳುತಾ ನಿಕುಂಭನಿಗಿಂತೆಂದಂ ||

ರಾಗ—ಭೋಗಷಟ್ಪದಿ

(ಧಾಟಿ—ಭಳಿರೆ ಪಾರ್ಥನಣುಗ ನಿನ್ನ ।)

ಖಳನಿಕುಂಭ ಕೇಳು ನೀನು
ಕಳವಿನಿಂದ ತಂದೆ ನಮ್ಮ
ಜಲಜಮುಖಿಯನದಕೆ ನಿನ್ನ
ತಲೆಯ ಕೊಂಬೆನು ।
ಕಳವಿನಿಂದ ನಟರವೇಷ-

ಗಳಲಿ ವಜ್ರನಾಭಸುತೆಯ-
ನೆಳೆದುತಂದ ನಿನಗೆ ತಕ್ಕ
ಫಲವ ತೋರ್ಪೆನು ॥ ೧ ॥

ತರುಣಿ ಮೆಚ್ಚಿ ಬಂದಳೆನಗೆ
ವರಿಸಿಕೊಂಡೆನವಳನೀಗ-
ಲುರುಬಿ ತಂದುದೇತಕಿವಳ
ನರುಹು ನಿಜವನು ।
ಧುರದಿನಿಮ್ಮನೆಲ್ಲರನ್ನು
ಮುರಿದ ಮೇಲೆ ನನಗೆ ಮೆಚ್ಚಿ
ಬರುವಳೀ ಕುಮಾರಿಯಿನ್ನು
ಪರಿಕಿಸೆಂದನು ॥ ೨ ॥

ಯದುಗಳನ್ನು ಮುರಿವುದೆನ್ನ
ಕದನದಲ್ಲಿ ಸಾಯದುಳಿದ-
ರಿದಕೊ ನೋಡೆನುತ್ತ ಸರಳ
ಕೆದರಿ ಬಿಟ್ಟನು ।
ಅದನು ಗಣಿಸದವನು ದೊಡ್ಡ
ಗದೆಯನೆತ್ತಿ ಹೊಯ್ದನಾಗ
ಮದನ ಮೂರ್ಛೆಯಿಂದ ಬಿದ್ದ-
ನಧಿಕ ತಾಪದಿ ॥ ೩ ॥

ರಾ—ಭೈರವಿ; ತಾಳ-ಅಷ್ಟ

(ಧಾಟಿ—ಎಲವೊ ಬಾಲಕನೆ ಕೇಳು—ಎಂಬಂತೆ)

ಮದನ ಬೀಳಲು ಕಾಣುತ್ತ । ಕಿರೀಟಿ ಕೋ-
ಪದಲಿ ಬಾಣವ ತೂಗುತ್ತ ॥
ಅಧವು ನೀ ಪಾರ್ಥನಸ್ತ್ರದ ಸವಿನೋಡೆನು-
ತೊದಗಿ ದೈತ್ಯನಿಗೆಚ್ಚನು ॥ ೧ ॥

ಅರ್ಜುನನೇನೋ ನೀನು । ಕೇಳ್ದರಿಯಾ ಎ-
ನ್ನಾರ್ಜಿತ ಶಕ್ತಿಯನು ॥
ನಿರ್ಜರರೆನಗಂಜುವರ್ಜೀವದಾಶೆಯ
ವರ್ಜಿಸಿ ನಿಲ್ಲೆಂದನು ॥ ೨ ॥

ಸುರರೆಲ್ಲರನು ಗೆಲಿದು । ನಾರಿಯರ ನಿ-
ಷ್ಕರುಣದಿ ಸೆರೆವಿಡಿದು ।
ಗರುವದೊಳಿಹ ಮುರ-ನರಕರ ಗತಿಯನ್ನು
ಸ್ಮರಿಸಿಕೊಳ್ಳೆನುತೆಚ್ಚನು ॥ ೩ ॥

ಕಲಿ-ನರಕಾದ್ಯರನ್ನು । ಕಾಳಗದಲ್ಲಿ
ಕೊಲೆಗೈದ ಹೆಮ್ಮೆಯನು ॥
ಇಳಿಸಲೀ ಪರಿಯಿಂದ ಮುಳಿದು ಬಂದಿಹೆನೆಂದು
ಖಳನಿಕುಂಭಕನೆಚ್ಚನು ॥ ೪ ॥

ಅಂತಾದರಾಗಲಿನ್ನು ನಿಲ್ಲೆನುತ ವಿ-
ಕ್ರಾಂತ ಧನಂಜಯನು ॥
ತಾಂ ತವಕದಲಿ ಮಹಾಂತ ಶರಾಳಿಯ-
ನಾಂತು ಕೊಳ್ಳೆನುತೆಚ್ಚನು ॥ ೫ ॥

ಬರುವ ಬಾಣೌಘವನು । ಖಂಡಿಸುತ ಬೊ-
ಬ್ಬಿರಿದು ಶರಂಗಳನು ಸುರಿಸಲಾದೈತ್ಯನು ನರನದನೆಲ್ಲವ
ಪರೆಗಡಿದಿಂತೆಂದನು ॥ ೬ ॥

ಭಾಮಿನಿ

ಎಲೆ ಖಲಾಧಮ ನಿನ್ನ ಪೌರುಷ-
ದಳವನರಿದೆನು ಸುರವಿರೋಧಿಗ-
ಳೊಳಗೆ ಬಲುಗೈ ನೀನು ಮತ್ಸಾಹಸವ ನೋಡೆನುತ ।
ಮುಳಿದು ನಿಜಗಾಂಡೀವಧನ್ವದೊ-
ಳೆಳೆದು ಬಿಡೆ ವೈತಸ್ತಿಕಾಸ್ತ್ರವ
ಖಳನ ತೋಳನು ಕಡಿದುದಾ ಮಾರ್ಗಣ ಮಹೋಗ್ರದಲಿ ॥ ೭ ॥

ರಾಗ—ಸೌರಾಷ್ಟ್ರ; ತಾಳ–ತ್ರಿಪುಟ

ತೋಳು ಕಡಿಯಲು ಖಳನು ಕೋಪಕ-
ರಾಳಮುಖದಲಿ ಗರ್ಜಿಸುತಲೊ-
ತ್ತೋಳಿನಲಿ ಪರಿಘವನು ಪಿಡಿದನು ಪೇಳಲೇನು ॥ ೧ ॥

ತುದಿಯ ದಿನ ನಿನಗಿಂದು ಬಾರೆನು-
ತಿದಿರೊಳಬ್ಬರಿಸುತ್ತಲಿರ್ದವ-
ನೊದಗಿ ಮರೆಯಲಿ ಹೊಯ್ದನಾಪರಿಘದಲಿ ನರನ ॥ ೨ ॥

ಪರಿಘಹತಿಯಲಿ ಫಲುಗುಣನು ಮೈ-
ಮರೆದು ಮೇದಿನಿಗೊರಗಲಾ ಮುರ-
ಹರನು ಮೈದೋರಿದ ನಿಕುಂಭಾಸುರನ ಮುಂದೆ ॥ ೩ ॥

ಎಲವೆಲವೊ ಹೆಂಗಳ್ಳ ನೀ ಹೆ-
ಕ್ಕಳಿಸದಿರು ಕೇಳ್ ನಿನ್ನ ರಾಕ್ಷಸ
ಕುಲದ ಗಂಟಲಗಾಣ ನಾನೇ ನಿಲುವೆನೀಗ ॥ ೪ ॥

ಎನುತ ಹರಿ ಕೆಂಗೋಲ್ಗಳನು ಸುರಿ-
ವನಿತರಲಿ ಚೇತರಿಸಿಕೊಂಡ-
ರ್ಜುನನು ಘನಶೌರ್ಯದಲಿ ಗೋವಿಂದನಿಗೆ ನುಡಿದ ॥ ೫ ॥

ರಾಗ—ಶಂಕರಾಭರಣ; ತಾಳ–ಮಟ್ಟೆ

ತಾಳು ತಾಳು ದೇವ, ದೇವತಾ-ವಿಪಕ್ಷನ
ತೋಳನೊಂದನರಿದೆನುಳಿದುದೊಂದನೀಕ್ಷಣ ।
ಕಾಳಗದಲಿ ಕಡಿದು ಕಡೆಗೆ ಶಿರವನರಿವೆನು
ಕಾಲನೂರಿಗಟ್ಟಿಬಿಡುವೆನಿವನನೆಂದನು ॥ ೧ ॥

ಅನಿತರೊಳಗನಂಗನೆದ್ದು ಬಂದು ನುಡಿದನು
ವನಜನೇತ್ರ ಶಕ್ರಸುತರಿಗೊಮ್ಮೆ ಎನ್ನನು ।
ದನುಜ ಗೆಲಿದನದರ ದೆಸೆಯೊಳಿವನನೀಗಲೇ
ಹನನಗೈವೆ ನೀವು ನಿಲ್ಲಿರೆಂದನಾಗಲೇ ॥ ೨ ॥

ರಾಗ—ನಾದನಾಮಕ್ರಿಯೆ; ತಾಳ-ಅಷ್ಟ

(ಧಾಟಿ—ಮರನ ಹೊಯ್ಲುಗಳಾಂತು ಭೀಮನು ।)

ಮಿತ್ರ-ಪುತ್ರರ ಮಾತ ಕೇಳ್ದನು । ಪದ್ಮ-
ನೇತ್ರನವರಿಗಿಂತು ನುಡಿದನು ॥
ರಾತ್ರಿಯೊಳೆನುಗಿಂತ ಶೂರರು । ದೇವ-
ಶತ್ರುಗಳತಿ ಮೋಸಗಾರರು ॥ ೧ ॥

ಒತ್ತೋಳಿನಿಂದಾದರೆಮ್ಮನು । ಮಾಯಾ-
ಶಕ್ತಿಯೊಳ್ ಗೆಲುವನಲ್ಲದಿರಿನ್ನು ॥
ಎತ್ತಲಾದಲು ಹಾಯ್ವನೀತನು । ಒಂದು-
ಯುಕ್ತಿಯನಿದಕಾಗಿ ಪೇಳ್ವೆನು ॥ ೨ ॥

ಅಳುಕಿ ಕಾಡಿನೊಳಡ್ಡಹಾಯ್ವರೇ । ಮತ್ತೆ
ಕಲಹದಿ ಮಾಯಕ ಗೈವರೇ ॥
ಖಳರಾಯುಗವಕಾಶವೀಯದೆ । ನೀವು
ನಿಲುವುದೀ ನುಡಿಯನ್ನು ಮರೆಯದೆ ॥ ೩ ॥

ಭಾಮಿನಿ

ತರುಣಿಯನು ರಕ್ಷಿಸುತ ನಾನೀ
ದುರಿತಕರ್ಮನನೆಸುವೆನಸುವನು
ಹೊರಡಿಸುವೆನೆನಲದಕೆ ವಿಜಯ-ಮನೋಜರೊಡಬಡುತ ।
ದುರುಳನೆಡಬಲದಲಿ ಮಹಾಸ್ತ್ರವ
ಸುರಿಸುತಾತನ ಚಿತ್ತವೃತ್ತಿಯ
ಮುರಿಯುತಿರೆ ಮಧುವೈರಿ ನುಡಿದನು ಖಳನಿಕುಂಭನಿಗೆ ॥

ರಾಗ—ಮಾರವಿ; ತಾಳ-ಏಕ

ಅಸುರಾಧಮ ಕೇಳ್ ವಿಶಿಖವಿದನು ಸೈ-
ರಿಸಿದರೆ ನೀನಿನ್ನು ।
ಅಸಮದ ಭಟನೆಂದುಸಿರುತಲೆಚ್ಚನು
ನಿಶಿತ ಮಹಾಸ್ತ್ರವನು ॥ ೧ ॥

ನರಗುರಿ ನಿನ್ನಯ ಸರಳನು ಮುರಿವೆನು
ಬರಲೆನುತವನೊದಗಿ ।
ಪರಿಘದಿ ಬಡಿಯಲ್ಕರಿಯದೆ ಬಂದುದು
ಹರಿಯಸ್ತ್ರವು ಭರದಿ ॥ ೨ ॥

ಯದುವೀರನ ಶರವುದರವ ಕೊರೆಯಲು
ಮದಮುಖದಿತಿಸುತನು ।
ಬದಲಾವುದನೆಣಿಸಿದನೋ ಮೃತನಂ
ಪದೊಳಿಳೆಗೊರಗಿದನು ॥ ೩ ॥

ವಿಗಡನ ಬೆನ್ನೊಳು ಬಿಗಿತದೊಳಿರ್ದಾ
ಮೃಗನಯನೆಯನವರು ।
ತೆಗೆದು ಕೃಪಾರಸದೃಗುಜಲವೊಸರಲು
ಮಗುಳಿಂತುಸಿರಿದರು ॥ ೪ ॥

ನೊಂದೆಯಲೌ ಖಳನಿಂದಾ ಪಾಪಿಯ
ಕೊಂದೆವು ನೋಡಿನ್ನು ।
ಸುಂದರಿ ಮರುಗದಿರೆಂದುಪಚರಿಸಿದ-
ರಂದಾ ತರುಣಿಯನು ॥ ೫ ॥

ಪರಮಾನಂದದಿ ತರುಣಿಯು ನಿಮ್ಮಯ
ಕರುಣದೊಳಿಂದೆನಗೆ ।
ಹರಣವುಳಿದುದದನೊರೆಯುವುದೇನೆನು
ತೆರಗಿದಳವರಡಿಗೆ ॥ ೬ ॥

ವಾರ್ಧಕ

ಅಡಿಗೆರಗಿದಬಲೆಯಂ ಪಿಡಿದೆತ್ತಿ ತಕ್ಕೈಸಿ
ಜಡಜಲೋಚನ-ಪಾರ್ಥ-ಕಂದರ್ಪರಾ ವಧುವ-
ನೊಡಗೊಂಡು ಕಾಶ್ಯಪಿಯನಡರಿ ನಿಜನಗರಾಭಿಮುಖರಾಗಿ ಪೋಗುತಿರಲು।

ಪೊಡವಿಯೊಳ್ ಮೃತನಂತೆ ಕೆಡೆದಿರ್ದ ದಾನವಂ
ಸಿಡಿದೆದ್ದು ತನ್ನ ದುಃಸ್ಥಿತಿಗೆ ತಾನೇ ಚೋದ್ಯ-
ಬಡುತ ಕೃಷ್ಣಾದಿಗಳ ಮೇಲೆ ಘನಕೋಪದಿಂ ಕಿಡಿಗೆದರುತಿಂತೆಂದನು ||

## ನಿಕುಂಭಶೋಕ

ರಾಗ-ಕಾಪಿ ; ತಾಳ—ಅಷ್ಟ

(ಧಾಟಿ—ಎನಲೆಂದನಾಶತಯಾಗ | ಚೆಲ್ವವನಿತೆ ಮೇನಕೆಯೆ |)

ಏನಿದಾಶ್ಚರ್ಯವಿಂದೆನಗೆ | ಶಕ್ತಿ
ಹೀನವಾಯಿತು ಯುದ್ಧದೊಳಗೆ ||
ಮಾನವರಿದಿರು ನಿಧಾನಿಸಲಿದುವೆ ನ-
ವೀನವೆಂದೆನ್ನಯ ಮಾನಸಕರಿವುದು || ೧ ||

ಧೈರ್ಯವೆ ತಗ್ಗುತ ಬಂತು | ಮತ್ತು
ಸ್ಥೈರ್ಯವೆ ಕುಗ್ಗಿದುದಿಂತು ||
ಶೌರ್ಯ ತೊಲಗಿತೆನ್ನ ಮಾರುತಗತಿ ಮಂದ
ವಾರಣಗತಿಯಾಯ್ತಿ ಕಾರ್ಯಕೇನೆಂಬೆನು || ೨ ||

ಈಗ ಸಿಕ್ಕಿತು ಮನದೊಳಗೆ | ಇನಿ-
ತಾಗಲು ಕಾರಣವೆನಗೆ ||
ಹೀಗೆ ವಿಶೇಷತ್ವಕ್ಕಾಗಿ ನಾ ಮೂರು ರೂ-
ಪಾಗಿರ್ದ ಕಾರಣ ಭಾಗವಾಯಿತು ಶಕ್ತಿ || ೩ ||

ಒಂದು ದೇಹದೊಳಿಹ ಶಕ್ತಿ | ಮೂರ-
ರೊಂದಂಶವಹುದೆನ್ನ ಯುಕ್ತಿ ||
ದಂದುಗಕೆಡೆಯಾಯಿತೊಂದುತೋಳಿನ ಕಾಯ-
ಪಂದವಲ್ಲದರಿಂದ ಕೊಂದು ಕೊಂಡಪೆನೆಂದ || ೪ ||

ಬಳಿಕ ಗಾಂಧರ್ವವೇಷವನು | ತಾನು
ಕಳಚಿ ಬೀಸಾಡಿ ಮತ್ತವನು ||
ಘಳಿಲನೆ ತನ್ನಯ ತಲೆಯನ್ನೆ ಖಂಡಿಸಿ-
ಯಲಘು ದಾನವದೇಹದೊಳಗೆ ಸೇರಿದನಂದು || ೫ ||

ರಾಗ-ನೀಲಾಂಬರಿ ; ತಾಳ–ರೂಪಕ

(ಧಾಟಿ—ಯಾತಕೆ ಮಲಗಿದೆ ರಥದಲಿ)

ಧರಣಿಪ ಲಾಲಿಸು ಕನ್ಯಾ। ಪುರದೊಳಗಾಸುರಮಾಯದೊ-
ಳೊರಗಿದ ವಧುಗಳು ಬಳಿಕೆ। ಚ್ಚರುತೆಡಬಲದೆಡೆಯ ॥
ಪರಿಕಿಸೆ ಭಾನುಜೆ ಕಾಣಿಸ। ದಿರೆ ಪದ್ಮಿನಿ ಸದ್ಮಿನಿಯೆಂ
ದಿರುವಂಗನೆಯರು ತಮ್ಮೊಳು। ಮರುಗುತಲುಸಿರಿದರು ॥ ೧ ॥

ಎತ್ತಲು ಪೋದಳು ನಮ್ಮಯ ಮಿತ್ರೆಯು ಮಗುಳಾಕುವರಿಯ-
ನೊತ್ತಾಯದೊಳೆಳೆದೊಯ್ದನೊ। ಪತ್ತನಕಾ ಖಲನು ॥
ಯುಕ್ತಿಯೊಳೆಲ್ಲಾದರು ದೃಢ। ಚಿತ್ತದೊಳಡಗಿದ್ದಳೊ ಪುರ-
ದತ್ತಲು ಹಾಯ್ದಳೊ ತಿಳಿಯದೆ। ನುತ್ತಳಲಿದರವರು ॥ ೨ ॥

ಅನಿತರೊಳಲ್ಲಿಗೆ ರೈವತ। ಗಿರಿಯಿಂದಲಿ ಸಾಂಬಾದಿಗ-
ಳನುಸರಣೆಯೊಳೈತಂದರು। ಘನಭುಜಬಲ ಭಾನು ॥
ವನಜಾಂಬಕಿಯರು ಮರುಗುವ। ದನು ಕಂಡೇನಾಯ್ತೇನಿದು
ತನಗರುಹಿರಿ ಎನಲಾತಗೆ। ವನಿತೆಯರುಸಿರಿದರು ॥ ೩ ॥

ರಾಗ—ಪಂತುವರಾಳಿ; ತಾಳ—ಮಟ್ಟೆ

(ಧಾಟಿ—ಆಗದಾಗದಾಗದಾಗದು ಎಂಬಂತೆ)

ಭಾನುದೇವ ಕೇಳು ಲಾಲಿಸಿ। ನಮ್ಮ ನುಡಿಯ
ಸಾನುರಾಗ ದಯೆಯ ತೋರಿಸಿ ॥ ಪ ॥

ಘನತೆಯಿಂದ ಬಂದನೋರ್ವನು। ತಾ ನಿಕುಂಭ-
ನೆನಿಪ ದನುಜನೆಂದು ಪೇಳ್ದನು ॥
ವನಜವದನೆ ಭಾನುಮತಿಯ
ಮನವನೊಲಿಸಿಕೊಂಬ ಕಾರ್ಯ-
ಕೆನುತ ಹಲವ ನುಡಿದನದಕೆ
ವನಿತೆಯೊಪ್ಪಲಿಲ್ಲವಯ್ಯ ॥ ೧ ॥

ಹಿಡಿದನವಳ ಮುಡಿಯನಾತನು । ಬೇಡೆನುತ್ತ
ತಡೆದೆವಾವು ನಮ್ಮ ಮಾತನು ॥
ದಡಿಗ ಕೇಳಲಿಲ್ಲ ಉರುಬಿ
ಬಿಡಿಸಿಕೊಂಡು ಹಾಯ್ದ ಳಾಕೆ
ಕಡೆಗೆ ನಿದ್ರೆಯಿಂದ ನಾವು
ಕೆಡೆದೆವರಿಯೆವದರ ಮುಂದೆ ॥ ೨ ॥

## ಭಾನುಕ್ರೋಧ

ರಾಗ—ಸೌರಾಷ್ಟ್ರ; ತಾಳ—ತ್ರಿಪುಟ

ನುಡಿಯು ಕೇಳುತ ಭಾನು ಖತಿಯಲಿ
ಕಿಡಿಗೆದರುತಿಂತೆಂದ ನಿಮ್ಮಯ
ಬೆಡಗಿನುಕ್ತಿಗಳಿಂದ ಮನವೊಡಬಡುವದೆಂತು ॥ ೧ ॥

ಕುವರಿಯೆತ್ತಲು ಪೋದಳಾದಾ-
ನವನದೆಲ್ಲಿಗೆ ಹಾಯ್ದ ನಿದನೆ-
ಲ್ಲವನು ತಿಳಿವಂತುಸಿರದೇಕಳಲುವಿರಿ ಬರಿದೆ ॥ ೨ ॥

ಎತ್ತಣಿಂದಲಿ ನಿದ್ರೆ ಬಂತಾ
ಹೊತ್ತಿನಲಿ ನಿಮಗಿದು ಮನಸ್ಸಿಗೆ
ಚಿತ್ರವಾಯ್ತೇನೆಂದು ಪೇಳಲಿ ಮತ್ತೆ ನಿಮಗೆ ॥ ೩ ॥

ಇಲ್ಲಿ ಕನ್ಯಾಪುರದ ರಕ್ಷೆಗೆ
ನಿಲ್ಲಿಸಿರ್ದಾಳುಗಳ ಕಾಣೆನಿ-
ದೆಲ್ಲ ಚೋದಿಗವಿಹುದು ತನಗೆನುತಲ್ಲಿ ನುಡಿದ ॥ ೪ ॥

ಭಾಮಿನಿ

ಧರಣಿಪತಿ ಕೇಳನಿತರೊಳಗಾ
ಹರಿಕುಮಾರನ ಬಳಿಗೆ ಬಂದಾ
ಪುರದ ರಕ್ಷೆಯ ಸೂತಕುಲದಾಳುಗಳು ವಂದಿಸಲು ।

ಕೆರಳಿ ಕೇಳ್ದನು ಭಾನುವೆಲೆನರ-
ಕುರಿಗಳಿರ ನೀವೆಲ್ಲಿ ನಮ್ಮಯ
ತರಳೆಯೆತ್ತಲು ಪೇಳಿರೆನಲವರೆಂದರಭಿನಮಿಸಿ ||

ರಾಗ—ಬೇಗಡೆ; ತಾಳ—ಅಷ್ಟ

(ಧಾಟಿ—ಖಳರಾಯ ಬಿನ್ನ ಮಾಡ್ಯಾನ್ಕs । ಎಂಬಂತೆ).

ಬಾನ್ನೈನರೇಯಿಗಾಗಳ್ ಕ್ಯಾಣ್ಕs ||ಪ|| ನಮ್ಗೆ
ಯಾನಾಯಿತೆಂಬುದ ಬ್ಯಾಕೆ ನೀವ್ ಕಾಣ್ಕs ||ಅ. ಪ||
ರಾಮ್ಮೈನರ್ ಮಗನಿಲ್ಲಿಗ್ ಬಂದ್ರs । ಕಡ್ಗೆ
ಕಾಮ್ಮೈನರ್ ಹಾರ್ಕಂತ ಬಂದಿಲ್ಲಿ ನಿಂದ್ರs ||
ಬಾ ಮಗ್ನೆ ಸಮ್ದುರ್ಕಿಂದೆಂದ್ರs । ನಮ್ಮ
ಸೋಮ್ಮೈನೂ ಬರ್ಲಿ ಎಂಬೀ ಮಾತ ತಂದ್ರs || ೧ ||

ಬ್ಯಾಗ್ ಬಿಡ್ತೊ ನಿಮಗೆಂದು ಹ್ಯಾಳ್ರs । ಬಿಡು-
ಕಾಗದೀ ಮನಿನೆಂದರದನೊಂದೂ ಕ್ಯಾಳ್ರs ||
ಸಾಗಿದೆವೌರ್ ಕೂಡೆ ಬ್ಯಾಕೆ । ಮನಿ-
ಯಾಗೆಲ್ಲಾ ಹೆಮ್ಮಕ್ಕಳ್ ಕೂಕಂಡಿರ್ ಸುಮ್ಕೆ || ೨ ||

ಜಲಕ್ಕೈಡಿಯಾಡುಕಿಂದ್ಯಾಕs । ದೋಣಿ
ಎಳಕಂಡ್ಸ ತರ್ಕs ಬ್ಯಾಕಿಲ್ಲಿಂದ ಹ್ಯೊಕs ||
ಬಳಿಕೆಂದರದ್ಯಮ್ಯಾನೆ ನಾವು। ಔರ
ಕೆಲಸೂ ಮಾಡ್ಕೊಟ್ಟಿಕ್ ಬಂತಿತ್ಕೇಣೆ ನೀವು || ೩ ||

ವಬ್ಬ್ರs ಮ್ಯಾನಿಬ್ಬ್ರs ಬಂದ್ ಹಾರ್ರ್ರs ಅವ-
ರಿಬ್ರನ್ನೂ ಚಂಚ್‌ಕಂಡ್ ಬ್ಯಾಕೊಬ್ಬ್ರs ಕಾಲೂರ್ರ್ರs ||
ಅಬ್ಬಬ್ಬ ಜಲಕ್ಕೈಡಿಯಂತೋ । ಇಂತಾ
ಹಬ್ಬೊಕಾತಾಯ್ಕಂಡ್ಸ ತಡುವುಂಚೂಟಾಯ್ತs || ೪ ||

ಸುಟ್ ಪುರದ ವಡಿರಿಲ್ಲಿಗ್ ಬಂದ್ಯs। ನಮ್ಮ
ಪುಟ್ಟಮ್ಮನ್ ನ್ಯಾಕಂಡೇ ಹಾರ್ರ್ರs ಮ್ಯಾನೆಂಡs ||

ಕುಷ್ಣೈಲನರ್ ಹೆವ್ಮಕ್ಕಳ್ ಹ್ಯಾಳ್ರ್ಯ। ಮಗ್ನ
ಕಟ್ಕಂಡೇ ವ್ಯಾನ್ಗಟ್ಪೊ ಹತ್ರ್ಯ ಮುಂದೋಡ್ಯ ॥ ೫ ॥

ವಾರ್ಧಕ

ಇಂತವರ ನುಡಿಗೇಳಿ ಭಾನು ಸಾಂಬನ ನೋಡು-
ತಂ ತನ್ನ ಸುತೆಯಂ ನಿಕುಂಭನಪಹರಿಸಿದಂ
ಕಂತುಸಹಿತೈಯನಾತನ ಧುರಕೆ ಷಟ್ಪುರಕೆ ತೆರಳಿದಂ ನಿಶ್ಚಯಮಿದು ।
ಎಂತಾದಡೀರ್ವರೇ ದನುಜರಂ ಗೆಲ್ವುದು ಮ-
ಹಾಂತ ಪ್ರಯತ್ನಮಹುದವರ ಬೆಂಬಲವಾಗಿ
ನಿಂತು ಕಾದುವರೆ ನಾವ್ಪೋಗಬೇಕೆನುತ ಉಬ್ಬೇರಿದಂ ಧೀರತೆಯೊಳು ॥

## ಭಾನುಮತಿಯ ಪುನರಾಗಮನ :

ಭಾಮಿನಿ

ಅರಸ ಕೇಳನಿತರಲಿ ಬಂದರು
ಹರಿ-ಧನಂಜಯ-ಕಾಮರಾ ವರ
ತರುಣಿ ಭಾನುಜೆ ಸಹಿತ ಗರುಡನ ಬೆನ್ನಿನಿಂದಿಳಿದು ।
ಹರುಷದಿಂದಾ ಭಾನು ಸಾಂಬಾ-
ದ್ಯರು ಮುಕುಂದಾದಿಗಳ ಚರಣದೊ-
ಳೆರಗಲುಚಿತದೊಳವರನವರಪ್ಪಿದರು ಪ್ರೀತಿಯಲಿ ॥

ರಾಗ–ಸೌರಾಷ್ಟ್ರ ; ತಾಳ— ಏಕ

(ಧಾಟಿ—ಎನಲಿಂತೆಂದ ನೃಪತಿಗೋತ್ರ। ಹನನಗೈದ ಪಾಪವೆನ್ನ ।)
ಬಳಿಕಲೆಲ್ಲರೊಂದುಗೂಡಿ
ಹಲವು ಪರಿಯ ಮಾತನಾಡಿ
ತಿಳಿದು ತಮ್ಮೊಳಾದ ಕಥೆಯ ನಲವನಾಂತರು ।
ಚಳಕದಿಂದ ಪದಕೆ ಮಣಿದ
ಲಲನೆ ಭಾನುಮತಿಯ ಭಾನು
ಸೆಳೆದು ಮುದ್ದಾಡಿದನು ಮೋದಗೊಳುತಲಾಗಲೇ ॥ ೧ ॥

ಅಂದವೆಲ್ಲವನ್ನು ಕಂಡಾ-
ನಂದಶರಧಿಯಲ್ಲಿ ಮುಳುಗಿ
ಮಂದಯಾನೆ ಭಾನುಮತಿಯನಂದು ಸಖಿಯರು ।
ಚಂದದಿಂದಾಲಿಂಗಿಸುತ್ತ-
ಲಿಂದುವದನೆ ನಿನ್ನ ಬಿಡಿಸಿ
ತಂದರೆ ಈ ಪುಣ್ಯಪುರುಷರೆಂದು ಪೇಳ್ದರು ॥ ೨ ॥

ಪದುಮಗಂಧಿನಿಯರೆ ನಿಮ್ಮ
ಸದನುರಾಗದಿಂದ ಮತ್ತು
ಮೊದಲು ಗೈದ ಸುಕೃತದಿಂದಲೊದಗಿದರಲ್ಲಿ ।
ಕದನಗಲಿಗಳಿವರು ಖಳನ
ಸದೆದು ಬಿಡಿಸಿ ತಂದರೆನ್ನ
ಪದುಳವಾಯಿತೆಂದಳಾಗ ಮುದದಿ ಭಾನುಜೆ ॥ ೩ ॥

ವಾರ್ಧಕ

ಭೂರಮಣ ಕೇಳನಿತರೊಳಗಬುಧಿಯಾತ್ರೆಯಂ
ಪೂರೈಸಿಕೊಂಡಖಿಳ ಯಾದವರ್ ಬರಲಲ್ಲಿ
ಮಾರಮಣನವರೆಲ್ಲರಂ ಕೂಡಿಕೊಂಡು ನಿಜ ಪುರಿಗೈದಿ ಪಾರ್ಥಸಹಿತ ।
ಭೂರಿ ಹರುಷದೊಳಿರ್ದನತ್ತಲ್ ನಿಕುಂಭಕನ
ಚಾರಕರ್ ವಿಂಧ್ಯಗಿರಿಪಾರ್ಶ್ವದೊಳ್ ಕೀಶಪರಿ-
ವಾರದಿಂದೆಸೆವ ದ್ವಿವಿದಾಖ್ಯ ವಾನರನೆಡೆಗೆ ಪೋಗಿ ಮಣಿದಿಂತೆಂದರು ॥

ರಾಗ—ಕೇದಾರಗೌಳ ; ತಾಳ—ಅಷ್ಟ

ವನಚರೇಶ್ವರ ಕೇಳು ಮನಗೊಟ್ಟು ಕಲಿ ನಿಕುಂ
ಭನ ದೂತರಯ್ಯ ನಾವು ।
ದನುಜನಾಜ್ಞೆಯೊಳಿಂದು ನಿನಗೊಂದನುಸಿರಲು
ಘನವೇಗದಲಿ ಬಂದೆವು ॥ ೧ ॥

ದುರುಳ ಯಾದವರು ಹಿಂಜರಿಯದಲ್ಲಲ್ಲಿ ಕೊ
ಲ್ವರು ನಮ್ಮ ದನುಜರನು ।
ಮುರ-ನರಕರನು ಸಂಹರಿಸಿದರ್ ಬಳಿಕ ಕೊಂ
ದರು ವಜ್ರನಾಭನನು ॥ ೨ ॥

ಇನ್ನು ನಮ್ಮೆಲ್ಲವರನ್ನು ಕೊಲ್ಲದೆ ಬಿಡ-
ರೆನ್ನುತೆಮ್ಮೊಡೆಯ ತಾನು ।
ಮುನ್ನವೆ ಯದುವಂಶವನ್ನು ಮರ್ದಿಪೆನೆಂಬು-
ದನ್ನು ನಿಶ್ಚಯಿಸಿದನು ॥ ೩ ॥

ಸಖನಾದ ನೀ ಸಹಾಯಕನಾಗಬೇಕು ಯು-
ದ್ಧಕೆ ತನಗೆನುತೆಮ್ಮನು ।
ವಿಕಟ ಸಾಹಸಿ ನಿಕುಂಭಕನಟ್ಟಿದನು ನಿನ್ನ
ನಿಕಟಕೆಂದರು ದೂತರು ॥ ೪ ॥

## ಕಪೀಂದ್ರ ದ್ವಿವಿದನ ನಿಶ್ಚಯ

ರಾಗ—ಸೌರಾಷ್ಟ್ರ; ತಾಳ—ತ್ರಿಪುಟ

ಎಂದ ದೂತರ ನುಡಿಯ ಕೇಳ್ದು ಮ-
ದಾಂಧನಾ ದ್ವಿವಿದಾಂಕ ಹೂಂಕೃತಿ-
ಯಿಂದಲೆಡಬಲದವರ ನೋಡುತ ನಿಂದು ನುಡಿದ ॥ ೧ ॥

ಏನಿದೇನಚ್ಚರಿಯಕಟ ಹುಲು-
ಮಾನವರು ನರಮಾಂಸಭಕ್ಷಕ
ದಾನವರನೀ ತೆರದಿ ಕೊಲುವ ವಿಧಾನವೀಗ ॥ ೨ ॥

ಮುರನು ಹಿತಚಿಂತಕನು, ನರಕಾ-
ಸುರನು ಸುಪ್ರಿಯು, ವಜ್ರನಾಭನು
ಪರಮ ಮಿತ್ರ, ನಿಕುಂಭ ಸಖನಾಗಿರುವನೆನಗೆ ॥ ೩ ॥

ಅವರ ವೈರಿಗಳಾದವರನೀ
ಯವನಿಯೊಳಗುಳಿಸಿದರೆ ನಾನಿ-
ರ್ದವನು ಮೃತನಂತಾಗೆನೇ ಪೋಗುವೆನು ಭರದಿ ॥ ೪ ॥

ಐದಿಯಾ ದ್ವಾರಕೆಯೊಳಿರ್ದಾ
ಯಾದವಾಳಿಯ ಗಿರಿತರುಗಳಲಿ
ಹೊಯ್ದು ಕೊಂದಾ ಬಳಿಕ ಪ್ರಿಯಗೆ ನಿವೇದಿಸುವೆನು ॥ ೫ ॥

ಎಂದು ಕೋಪದೊಳಾಪ್ತ ಕಪಿಗಳ
ವೃಂದಸಹಿತಾ ದ್ವಿವಿದನಾರ್ಭಟಿ-
ಯಿಂದ ಪೊರಟನು ರೈವತಾಚಲಕೆಂದು ಮುಳಿದು ॥ ೬ ॥

ರಾಗ–ಭೈರವಿ ; ತಾಳ—ತ್ರಿಪುಟ

ಅರಸ ಕೇಳೀನೆಂಬೆನಾ ತರುಚರನು ಗರ್ವದೊಳೊದರುತ
ದುರುಳ ನರಕಾದ್ಯರಿಗೆ ಪ್ರೀತಿಯ ದೊರಕಿಸುವೆ ತಾನೆನ್ನುತ
ಬರುತ ಗೋದ್ವಿಜತಪಸಿಗಳ ಕಂಡಿರದೆ ಬಡಿದಪ್ಪಳಿಸುತ
ಮೆರೆವ ಋಷ್ಯಾಶ್ರಮಗಳನು ಮುರಿ ಮುರಿದು ಬೀಸಾಡುತ್ತ ಖತಿಯಲಿ
ಬಂದನಾಗ| ಈ ಪರಿ| ಯಿಂದ ಬೇಗ ॥ ೧ ॥

ಕಡುಗಿ ರೈವತನಾಮ ಗಿರಿವನದೆಡೆಗೆ ಬಂದೊಳಸೇರುತ
ಗಿಡಮರಂಗಳ ಮುರಿದು ಪಣ್ಗಳನೊಡನೆ ಮೆಲ್ಲುತ ಚೀರುತ
ಹೊಡೆದು ಕಲ್ಗಳ ಕಿಚ್ಚನೆಬ್ಬಿಸಿ ತಡೆಯದೆತ್ತಲು ನೋಡುತ
ಕಡೆಗೆ ಶಬರಾಲಯದ ಮೇಲದನಿಡಲು ಶಿಬಿಪುಟ ನೆಗೆದುದತಿ ವಿ-
ಸ್ತಾರದಿಂದ| ಚಟ ಚಟ| ಕಾರದಿಂದ ॥ ೨ ॥

## ಶಬರರ ಆಕ್ರೋಶ

ಕಂದಪದ್ಯ

ಆ ಸಮಯದೊಳದರೊಳ್ ರ-
ಕ್ತಾಸ್ಯಕ ರಕ್ತಾಕ್ಷರೆಂಬ ಸೋದರರೀರ್ವರ್ ।
ತೋಷದಿ ಬಂಧುಗಳೊಡನಿರು-
ತಾ ಶಿಖಿಯಂ ಕಂಡು ಕೂಡೆ ಕೂಗಿದರಾಗಳ್ ॥

ರಾಗ—ಘಂಟಾರವ ; ತಾಳ—ಅಷ್ಟ

(ಧಾಟಿ—ಆಸುರೆಯೆಂದುದಕೇಳುತ್ತಲವನತಿ ।)

ಮನೆಗೆ ಹತ್ತಿದೆ ಬೆಂಕಿಯಯ್ಯಯ್ಯೋ ಇಂ-
ದಿನೊಳದಾರಿಂದೆನುವದೆಮ್ಮಯ
ಮನಕೆ ತೋರದು ಬನ್ನಿರೋ ।
ಜನರೆ ಬೇಗನೆ ತೆಗೆಯಿರೋ ಸರಕನು
ಮನೆಯ ಹೊರಗಿನ ಬನಕೆ ಬಿಸುಡಿರೋ
ಬಿನುಗರಾದವರೋಡಿರೋ ॥ ೧ ॥

ನೀರ ತನ್ನಿರೊ ಬೆಂಕಿಗೆಂ-
ದೋರಣದಿ ಪರಿವಾರದೊಡನಾ-
ಗಾರದಗ್ನಿಯ ನಂದಿಸೆ ।
ಭೂರಿ ಯತ್ನವ ಗೈವಾಗ ದ್ವಿವಿದನಾ
ಕಾರ್ಯದವರನು ದೂರವೋಡಿಸಿ
ಏರಿ ಮರದಲಿ ಕುಳಿತನು ॥ ೨ ॥

ಕಂಡರಾಗಲೆ ಶಬರರಾ ಕಪಿಗಳ
ತಂಡಗಳನೊಡಗೊಂಡು ಕುಳಿತಿಹ
ಚಂಡ ಬಲವ ದ್ವಿವಿದನ ।
ಭಂಡ ಕೋತಿಗಳ್ ಮನೆಗೆ ಬೆಂಕಿಯನಿಕ್ಕಿ
ಅಂಡಿಕೊಂಡಿವೆ ಖಂಡಿಸುವೆವೀ
ಹಿಂಡನೆನುತುಬ್ಬೇರ್ದರು ॥ ೩ ॥

ರಾಗ—ತುಜಾವಂತು ; ತಾಳ—ಮಟ್ಟೆ

(ಧಾಟಿ—ಕರ್ಣನಯ್ಯನನ್ನು ಕಾಣಿರೋ। ಸಕಲ ಜನರು ।)

ಎದ್ದರಾಕಿರಾತ ಸುಭಟರು ॥ ಪ ॥ ಗರ್ಜಿಸುತ್ತ-
ಲೆದ್ದರಾ ಕಿರಾತ ಸುಭಟರು ॥ಅ. ಪ.॥
ಬಿಲ್ಲು ಬಾಣ ಖಡುಗ ಶೂಲ ಶಲ್ಯ ಮುದ್ಗರಾದಿಯಾದ
ಎಲ್ಲ ಕೈದುವಿಡಿದು ನಾಯ್ಗಳೆಲ್ಲವನ್ನು ಕರೆಸಿಕೊಂಡು ॥ ೧ ॥

ಹೊಡೆಯಿರದನು ಹಿಡಿಯಿರಿದನು ಕಡಿಯಿರಿದನು ಕೆಡಹಿರಿದನು
ಬಡಿಯಿರಿದನು ಮಡುಹಿರಿದನು ಬಿಡದಿರೆನುತ ನುಡಿಯುತಾಗ ॥ ೩ ॥

ರಾಗ—ಶಂಕರಾಭರಣ ; ತಾಳ—ಮಟ್ಟೆ

(ಧಾಟಿ—ಎನಲು ರಾಮನು। ಎನಲು ಪಾರ್ಥನು।)

ಬರುವ ಶಬರರ। ಕಂಡುದ್ವಿವಿದನು।
ತುರಿಸಿ ವೈರಿಯನು। ಹಲ್ಲಕಿರಿದನು।
ಕೆರಳಿ ಶಬರರು। ಸರಳನೆಚ್ಚರು।
ಮರಳಿ ಹೊಯ್ದರು। ಕಲ್ಗಳಿಟ್ಟರು ॥ ೧ ॥

ಎಲೆಲೆ ಬೇಡರೇ। ಕೇಳಿ ನಿಮ್ಮನು।
ಸಲಹುವಾತನು। ಕರೆಯಿರೆಮ್ಮನು ॥
ಕೊಲಿಸಬಹುದು ನೀ। ವೆಂದು ದ್ವಿವಿದನು।
ನೆಲಕೆ ಹಾರಿದು। ತಿವಿದನವರನು ॥ ೨ ॥

ದುಷ್ಟಕಪಿಯ ನೀ। ನೆಮ್ಮ ಮನೆಯನು।
ಸುಟ್ಟು ಗರ್ವದಿ। ನುಡಿವೆ ನಿಮ್ಮನು ॥
ಕುಟ್ಟಿಕೊಲುವೆವೆಂ। ದೆನುತ ಶಬರರು।
ಒಟ್ಟುಗೂಡಿ ಬಾ।ಣಗಳನೆಚ್ಚರು ॥ ೩ ॥

ವಾರ್ಧಕ

ಹಲವಂಗದಸ್ತ್ರಗಳ್ ದ್ವಿವಿದಂಗೆ ತಾಗಿದಾ-
ಗಳೆ ಮುರಿದವೇಂಗೈದೊಡಂ ನೋಯದಬ್ಬರಿಸಿ
ಮುಳಿದವಂ ತರುಶಾಖೆಯಿಂದಾ ಪುಳಿಂದಬಲವೆಲ್ಲವುಂ ಚೆಲ್ಲಬಡಿದು।
ಎಳೆದು ಶಬರಿಯುರನುಂ ಗೋಳ್ಗುಡಿಸಲೆಲ್ಲರುಂ
ನಿಲಲಾರದೋಡುತಿರೆ ರಕ್ತಮುಖ ರಕ್ತಾಕ್ಷ-
ರಳುಕಿ ಭಯಭಾರದಿಂ ದ್ವಾರವತಿಯುರಮನೆಗೆ ಸಾಗಿದರ್ ಬೇಗದಿಂದ ॥

ಭಾಮಿನಿ

ಅತ್ತಲಾ ಹಲಧರನು ಗೋಕುಲ-
ದತ್ತಣಿಂದೈತಂದು ನಡೆದ ಸ-
ಮಸ್ತವಾರ್ತೆಯನರಿದು ಕೃಷ್ಣಾದಿಗಳ ಮುಖದಿಂದ।

ಸ್ವಸ್ಥದಿಂದಿರುತಾಗ ಸತಿಯರ
ನೊತ್ತಸಹಿತಾ ವನವಿಹಾರದ
ಚಿತ್ತದಿಂದಿರಲೈದಿ ಶಬರರು ನುಡಿದರಭಿನಮಿಸಿ ॥

ರಾಗ—ಕಾಂಬೋಧಿ ; ತಾಳ—ಏಕ

(ಧಾಟಿ—ಸಲಾಮು ತಕ್ಕೋ ಸಾಲಲಿ ಧೊರೆಯೇ ।)

ರಾಮು ರಾಮು ರಾಜೇಂದ್ರ ಪರಾಕೋ
ಸಾಮಿ ಸಮುದ್ರಗಭೀರ।
ಪ್ರೇಮದಿಂದ ನಾವೆಂಬುದನಾಲಿಸು
ಕಾಮುಪಾಲ ಧುರಧೀರ ॥ ೧ ॥

ತಂಡ ತಂಡದಲಿ ಕೋತಿಗಳೈತಂ
ದಂಡಲೆದುಪವನದೊಳಗೆ।
ಕಂಡ ಕಂಡ ಗಿಡಮರಗಳ ಮುರಿದವು
ಲಂಡರಾದೆವದರೊಳಗೆ ॥ ೨ ॥

ಭಾಳ ದೊಡ್ಡದೊಂದದರೊಳು ಕಪಿಯೆ-
ಮ್ಮಾಳ್ಯಯ ಕುರಿಯನು ಕೊಟ್ಟು।
ಹಾಳುಗೈದುದೇನೆಂಬೆನು ಮನೆ ಬರಿ
ಬೋಳಾಯ್ತೆಲ್ಲವು ಸುಟ್ಟು ॥ ೩ ॥

ಹೊಡೆದರೆಮ್ಮ ಹತಿ ತಾಗದು ಕಪಿಗದು
ಗಿಡದ ಗೆಲ್ಲಿನೆಂದೆಮಗೆ।
ಬಡಿದು ಭಂಗಿಸಿದುದೋಡುತ ಬಂದೆವು
ತಡೆಯಲಾರದೀ ಕಡೆಗೆ ॥ ೪ ॥

ರಾಗ–ತೋಡಿ ; ತಾಳ—ಅಷ್ಟ

(ಧಾಟಿ—ಚರರೆಂದ ನುಡಿಗೇಳುತ್ತ—ಎಂಬಂತೆ)

ನುಡಿಯ ಕೇಳುತ ರಾಮುನು। ಕೋಪದಿ ಘುಡು-
ಘುಡಿಸುತೆಲವೊ ನಿಮ್ಮನು ॥

ಬಡ ಕೋತಿಗಳು ಬಂದು ಬಡಿದವೆಂಬುದನೆಮ್ಮ
ಕಡೆಗೆ ಬಂದುಸಿರುವ ನುಡಿ ಚೋದ್ಯವೆಂದನು ॥ ೧ ॥

ತೀರಿತಾಯುಷ್ಯವಿನ್ನು । ಆ ಕಪಿಪರಿ-
ವಾರಕೆನ್ನುತಲಾತನು॥
ಕೈರಾತರೊಡನೇಳೆ ನಾರಿಯರ್ ವಿಪಿನವಿ-
ಹಾರಕ್ಕೆ ಪತಿಯೊಡನೋರಂತೆ ನಡೆದರು ॥ ೨ ॥

ಭರದಿ ರೈವತಗಿರಿಗೆ। ಪೋಗಲು ಹಲ-
ಧರನಾಗಲದರೊಳಗೆ ॥
ಮೆರೆವ ಕಪಿಗಳನು ಪರಿಕಿಸೆಂದಾತನ
ಕರೆದು ತೋರ್ದರು ಸಂಗಡಿರುವ ಪುಳಿಂದರು ॥ ೩ ॥

ವಾರ್ಧಕ

ಅವನಿಪತಿ ಕೇಳ್ಮತ್ತೆ ಕಂಡು ಶಬರಾಳಿಯಂ
ದ್ವಿವಿದಕಪಿ ತರುಶಾಖೆಯಿಂದ ಬಡಿದೋಡಿಸುತ
ಯುವತಿಯರನೀಕ್ಷಿಸುತ ಕಣ್ಮುಚ್ಚಿ ತೆರೆದು ಪಲ್ಗಿರಿದು ಸಾಮೀಪ್ಯಕೈದಿ।
ಅವರ ಕೈಗಳ ಕುಸುಮ ತಾಂಬೂಲ ಪಾತ್ರಗಳ-
ನವಿಲಂಬದಿಂ ತೆಗೆದು ಬಿಸುಡುತ್ತ ಬಲದಿಂ-
ದವರನುರೆ ಬಿಗಿದೆಳೆದು ಬಿಡುತಿಂತು ಬಹುಪರಿಯ
ಕಪಿಚೇಷ್ಟೆಯಂ ಗೈದನು ॥

## ದ್ವಿವಿದ–ಬಲರಾಮರಲ್ಲಿ ಕದನ

ರಾಗ—ಮಾರವಿ ; ತಾಳ–ಏಕ

ಇದನೆಲ್ಲವನುಗ್ರದಲೀಕ್ಷಿಸಿ ಕೋ।ಪದಿ ಕೆಂಗಿಡಿಗಳನು।
ಕೆದರುತ ಬಲ ಬೇಗದಿ ಹಾಯ್ದಾಕಪಿ। ಯಿದಿರಿಂತುಸಿರಿದನು ॥ ೧ ॥

ಎಲೆ ಕೋತಿಯೆ ವೆಗ್ಗಳಿಸುವೆ ಈಪರಿ। ತಿಳಿಯದೆ ಮದ್ಬಲವ।
ನಿಲು ಮುಂದೆನುತಲಿ ಹಲವಲಿ ಹೊಯ್ದನು। ಮುಳಿದಾ ಕಪಿಶಿರವ ॥ ೨ ॥

ಕಡುಗಲಿ ರಾಮನ ಹೊಡೆತವನೆಣಿಸದೆ। ದೃಢದಲಿ ಕಪಿ ಮರದ
ಬುಡವನು ಮುರಿದುಗ್ಗಡಿಸುತ ಬಡಿದನು। ತಡೆಯದೆ ಹಲಧರನ ॥ ೩ ॥
ಬೆರಗಾದನು ಹಲಧರ ಹಲಹತಿಯಲಿ। ಜರಿಯದೆ ಗರ್ವಿಕೆಯ।
ಮೆರೆಯುವನಿವನಾರರಿದಪೆನೆನ್ನುತ। ಕರೆದೆಂದನು ಕಪಿಯ ॥ ೪ ॥

ರಾಗ—ನೀಲಾಂಬರಿ; ತಾಳ–ರೂಪಕ

ಆರೆಲೆ ವಾನರ ನೀನೀ ದಾರಿಯೊಳಿಲ್ಲಿಗೆ ಬರುವರೆ
ಕಾರಣವೇನುಸಿರೆನ್ನುತ ಧೀರನು ಕೇಳಿದರೆ।
ಈ ರಣಮಧ್ಯದೊಳೆನ್ನ ವಿಚಾರಿಪ ಭಟ ನೀನಾವನು
ಘೋರನೆ ಪೇಳೆನಗೆನುತುಬ್ಬೇರಿದ ಕಪಿವರನು ॥ ೧ ॥

ವನಚರ ಕೇಳ್ ಯದುವಂಶದ ಜನಪರು ರಾಮಾಚ್ಯುತರೆಂ
ದೆನಿಪ ಮಹಾತ್ಮರೊಳಗ್ರಜನೆನಿಸುವೆ ನಾನೆನಲು।
ದಿನಕರನಂದನ ಸುಗ್ರೀವನ ಸಖ ಮೈಂದದ್ವಿವಿದರೊ-
ಳನುಜನು ನಾಗಾಯುತಸತ್ವನು ತಾನಿಹೆನೆಂದ ॥ ೨ ॥

ತರಣಿಜ ಸುಚರಿತನಾತನ ಪರಮಪ್ರಿಯ ನೀನಾದರೆ
ದುರಿತಾಚಾರದೊಳೀತಕೆ ಬರುವುದು ಪೇಳೆನಲು।
ಮುರನರಕರು ಮೇಣ್ ವಜ್ರೋದರರೆನ್ನಯ ಸಖರವರನು
ಮುರಿದಿರಿ ನೀವದರಿಂದೀ ಪರಿಯಲಿ ಬಂದಿಹೆನು ॥ ೩ ॥

ಹುಲುಕಪಿ ನೀ ಬಂದಂದಿನಲಳಿದವರಿಗೆ ಹಿತವಾಗುವ
ಕೆಲಸವನಾವುದನೆಸಗುವೆ ಯಳುಕದೆ ಬಗುಳೆನಲು।
ಕಲಹದಿ ನಿಮ್ಮೆಲ್ಲವರನು ಕೊಲುವೆನು ದ್ವಾರಾವತಿಯನು
ಮುಳುಗಿಸುವೆನು ಜಲಧಿಯೊಳಾ ಬಳಿಕೈದುವೆನೆಂದ ॥ ೪ ॥

ಭಾಮಿನಿ

ಕೇಳಿ ಕಪಿಯೆಂದುದನು ಖಾತಿಯ
ತಾಳಿ ಎಲೆ ಕೋಡಗವೆ ನೀನಾ
ಖೂಳ ದನುಜರ ಹಿತಕೆ ಬಂದವನಾದ ಮೇಲಿನ್ನು ।

ಕಾಲನೂರಿಗೆ ನಿನ್ನನಟ್ಟದೆ
ಬಾಳಿಸುವುದೆನಗುಚಿತವಲ್ಲೀ
ಕಾಳಗಕೆ ನಿಲ್ಲೆನುತ ಮುಸಲವ ತೂಗಿದನು ರಾಮ॥

## ದ್ವಿವಿದ-ಸಂಹಾರ

ರಾಗ–ಕಾಂಬೋಧಿ ; ತಾಳ–ಝಂಪೆ

ಕೆರಳಿದು ಕಪೀಶನಬ್ಬರಿಸಿ ಕೇಳೆಲೆ ಚೋರ
ಹರಿಯೆತ್ತಲಿಹನವನನೀಗ।
ಕರೆಸಿಕೋ ಬೆಂಬಲಕೆ ಸರಿಯದಿರು ನಿಲ್ಲೆನ್ನುತ
ಮರವ ಮುರಿದೆರಗಿದನು ಬೇಗ ॥ ೧ ॥

ಮುಸಲದಲಿ ತರುವ ಖಂಡಿಸುತ ಬಲನೆಲೆ ಮುರ-
ದ್ವಿಷನ ದರ್ಶನವು ನಿನ್ನಂಥ।
ಪಿಸುಣರಿಗೆ ದೊರಕದೆನುತ ಸಮಸಾಹಸದ ಕಪಿ-
ಗುಸುರಿ ಹಲದಲಿ ಹೊಯ್ದನಾತ ॥ ೨ ॥

ಮತ್ತೊಂದು ತರುವ ಕಪಿ ಕಿತ್ತು ರಾಮನಿಗೆರಗೆ
ಕತ್ತರಿಸಿ ಮುಸಲದಿಂದನು।
ಸತ್ವನಿಧಿ ಬಲ ಹಲವನೆತ್ತಿ ಹೊಡೆದನು ಕಪಿಯ
ನೆತ್ತಿಯಲಿ ಹೇಳಲೇನದನು ॥ ೩ ॥

ತಲೆಯೊಡೆದೊಡೆಯು ಭೀತಿಗೊಳದೆ ಕಪಿ ಬಹಳ ತರು
ಶಿಲೆಗಳಲಿ ತಾಡಿಸಿದನದನು।
ತೊಲಗಿಸುತ ಮುಸಲವನು ಮುಳಿದೆತ್ತಿ ಹೊಯ್ದನಾ
ಖಲ ವಲೀಮುಖನನಾ ಬಲನು ॥ ೪ ॥

ಚೀರುತಾ ಕಪಿ ಕೆಡೆಯೆ ಜಾರಿತವನಸುವದನು
ದೂರದಲಿ ಕಂಡವನ ಬಲಕೆ।
ಸೇರಿ ಬಂದಿಹ ಕಪಿಗಳೋರಂತೆ ದೆಸೆದೆಸೆಗೆ
ಹಾರಿದವು ಜೀವರಕ್ಷಣೆಗೆ ॥ ೫ ॥

ವಾರ್ಧಕ

ಬಳಿಕ ಬಲನಖಿಳ ಕೈರಾತರಂ ಸಂತೈಸಿ
ಲಲನೆಯರ್ವೆರಸಿ ವನಕೇಳಿಯಂ ಗೈದು ನಿಜ
ನಿಲಯಕ್ಕೈತಂದಲ್ಲಿ ಕೃಷ್ಣಾದ್ಯರೊಡನೆ ಕಪಿಸಂಹಾರ ಸಂಗತಿಯನು।
ತಿಳುಹಿ ಮುದಗೊಳಿಸಲಾ ಮರುದಿನಂ ಪುರದ ಕಾ-
ವಲಿಗುಗ್ರಸೇನಾದಿ ವೀರರಂ ನಿಲಿಸಿ ಮಿ-
ಕ್ಕುಳಿದೆಲ್ಲರಂ ಕೂಡಿಕೊಂಡು ಬಲಕೃಷ್ಣಾರ್ಜುನಾದಿಗಳ್ ಪೊರಮಟ್ಟರು॥

## ಯಾದವರ ಅಶ್ವಮೇಧಯಜ್ಞಾರಂಭ

ಭಾಮಿನಿ

ಶರನಿಧಿಯ ಘೋಷದಲಿ ಹಾಯ್ದರು
ತರ ತರದ ವಾಹನಗಳಲಿ ನಿಜ
ತರುಣಿಯರು ಸಹಿತಾಗಿಯಾವರ್ತಾನದೀತಟಕೆ।
ತರದೊಳಾ ವಸುದೇವ ಮುಖ್ಯರೊ-
ಳರುಹಿ ನಿಜಚಾರಿತ್ರವನು ಘನ
ಹರುಷದಿಂವಲೆ ಸೇರ್ದರಾ ವರಯಜ್ಞಕಾರ್ಯದಲಿ॥

ರಾಗ—ಘಂಟಾರವ; ತಾಳ-ಏಕ

(ಧಾಟಿ—ಯಾಕೆ ನಮಗಾ ಮಾನಿನಿಯ ತಳ್ಳಿ—ಎಂಬಂತೆ)

ಅರಸ ಕೇಳ್ ಯಾದವರು ಬಳಿಕಿನಲಿ ಸಂಗ್ರಹವನೆಲ್ಲವ।
ತರಿಸಿಕೊಂಡಾ ನದಿಯ ತೀರದಲಿ।
ವಿರಚಿಸಿದ ಮುಖಶಾಲೆಗಾಗಿಯೆ
ನೆರೆ ನಿಮಂತ್ರಿತರಾಗಿ ಜೈಮಿನಿ
ಪರಶುಧರ ಜಾಬಾಲಿ ವ್ಯಾಸಾಂ-
ಗಿರಸಮುಖ್ಯರು ಬಂದರಲ್ಲಿಗೆ ॥ ೧ ॥

ಪತ್ನಿದೇವಕಿ ಸಹಿತ ಹರಿಪಿತನು ಆ ಯಜ್ಞದೀಕ್ಷಾ ।
ವೃತ್ತನಾದನು ಕ್ರಮದೊಳಚ್ಯುತನು ।
ಕ್ಷಾತ್ರಧರ್ಮದೊಳಶ್ವದೊಡನೆ ಸ-
ಮಸ್ತ ದೇಶವ ಗೆಲಿದು ಕಪ್ಪದ
ವಿತ್ತವನು ತರುವುದಕೆ ಪಡೆವೆರ-
ಸುತ್ತ ಫಲುಗುಣಸಹಿತ ಪೊರಟನು ॥ ೨ ॥

ಕಳುಹಿದರು ಚಾರಕರ ಮುಖದಿಂದ ರಾಜರಿಗೆ ಲೇಖನ ।
ಗಳನು ಕೃತವರ್ಮಾದ್ಯರನುವಿಂದ ।
ಚಳಕದಲಿ ಚರರೈದಿ ಗಜಪುರ-
ದೊಳಗೆ ಸಭೆಯಲಿ ಶೋಭಿಸುವ ಕುರು-
ಕುಲಜ ಕೌರವಗೆರಗಿ ಮನ್ನಿಸಿ-
ಕೊಳುತ ಲಿಖಿತವನಾತಗಿತ್ತರು ॥ ೩ ॥

ಭಾಮಿನಿ

ಚಾರಕರು ತನಗಿತ್ತ ಲಿಖಿತವ
ಕೌರವನು ಪಿಡಿದೆಡಬಲದ ಭಾ-
ಗೀರಥೀಸುತ-ಗುರು-ಕೃಪಾಶ್ವತ್ಥಾಮ ಮೊದಲಾದ ।
ಧೀರ ಕರ್ಣ-ಕಳಿಂಗ-ಸಿಂಧು ಮು-
ಹೀರಮಣ ಮುಂತಾದ ಬಹುಪರಿ-
ವಾರ ಕೇಳುವ ತೆರದೊಳೋದಿದನಧಿಕ ಹರುಷದಲಿ ॥

ರಾಗ— ಕಾಂಬೋಧಿ; ತಾಳ— ಝಂಪೆ

ಧರಣಿಪಸಮೂಹಸಾಗರಸುಧಾಕರ ಕೀರ್ತಿ
ವರಲತಾ ಕುಜಚಿತ್ರ ಚರಿತ ।
ಕುರುಪತಿಗೆ ದ್ವಾರಕಾಪುರದ ನೃಪ ವಸುದೇವ
ಬರೆದ ಸವಿನಯ ಭಾವಲಿಖಿತ ॥ ೧ ॥

ದೃಢದಿ ಷಟ್ಪುರನದಿಯ ದಡದೊಳೊಮ್ಮನದಿಂದ
ತೊಡಗಿರ್ಪೆನಶ್ವಮೇಧವನು ।
ಸಡಗರದೊಳಿಷ್ಟ ಸಖರೊಡನಿಲ್ಲಿಗೈತಂದು
ಕಡೆಗಾಣಿಸುವುದು ಕಾರ್ಯವನು ॥ ೨ ॥

ಎಂದು ಬರೆದಿಹುದನೊಲವಿಂದ ಕರ್ಣಾದಿಗಳ
ಮುಂದೆ ವಿಸ್ತಾರದಲಿ ಪೇಳ್ದಾ।
ಮಂದಹಾಸದ ವದನದಿಂದವರ ನೋಡಿ ಮುಗು-
ಳಿಂದನವನತಿ ಮುದವ ತಾಳ್ದು ॥ ೩ ॥

ರಾಗ—ಸಾಂಗತ್ಯ ; ತಾಳ-ರೂಪಕ

ಕೇಳಿರೈ ಕರ್ಣಾದಿ ಶೀಲವಂತರು ನಮ್ಮ
ಮೇಲೆ ಸಂಪ್ರೀತಿಭಾವದಲಿ।
ಓಲೆಯ ಯದುಭೂಮಿಪಾಲರು ಬರೆದರಿ-
ನ್ನಾಲಸ್ಯಗೊಳಬಾರದಿಲ್ಲಿ ॥ ೧ ॥

ಆದರೊಂದಾಯಜ್ಞದಾದ್ಯಂತದೊಳಗೊಂದು
ಬಾಧೆಯುಂಟಾ ನಿಕುಂಭಕನು।
ಸೋದರನನು ಕೊಂದ ಯಾದವರನು ಗೆಲ್ವ
ಹಾದಿಯನರಸುತ್ತಲಿಹನು ॥ ೨ ॥

ಅವನ ಸೀಮೆಯಲಿ ಯಾಗವನು ಮಾಡಿದರೆ ವಿ-
ಘ್ನವನೀಯದಿರನಾತನದಕೆ ।
ಅವಿವೇಕವಾಯ್ತು ಯಾದವರ ಯೋಚನೆಯೆಂಬ
ವಿವರವು ಹೊಳೆವುದು ಮನಕೆ ॥ ೩ ॥

ಅದರಿಂದ ನಾವಿನ್ನು ಮೊದಲಾಗಿ ಪೋಗಿ ನಿಲ್-
ವುದು ಯಾದವರಿಗಾಪ್ತರಾಗಿ॥
ಒದಗಿದರಸುರ ವೈರದ ಪೀಡೆ ಖಳರನ್ನು
ಸದೆ ಬಡಿಯುವುದನುವಾಗಿ ॥ ೪ ॥

ಎನುತ ಕೌರವನು ತನ್ನನುಜರು ಸೂತನಂ-
ದನ ಸೌಬಲಾದಿಗಳ್ವೆರಸಿ।
ಘನಚಾತುರ್ಬಲ-ದಿವ್ಯಧನು-ಶರಾದಿಗಳಿಂದ-
ಲನುವಾಗಿ ಪೊರಟನಾ ಸಹಸಿ ॥ ೫ ॥

ರಾಗ–ಕೇದಾರಗೌಳ ; ತಾಳ–ಅಷ್ಟ

ಬಳಿಕಿಂದ್ರಪ್ರಸ್ಥ-ಕೋಸಲ-ಮತ್ಸ್ಯ-ಪಾಂಡ್ಯ-ಕೇ-
ರಳವೊದಲಾಗಿರುವ।
ಹಲವು ಮಹೀಪತಿಗಳಿಗೆ ಚಾರಕರ್ಕೈದಿ
ಸಲಿಸಿ ಪೋದರು ಪತ್ರವ ॥ ೧ ॥

ಅರಸಧರ್ಮಜನತಿ ಹರುಷದಿ ಮುಂದಾಗಿ
ತೆರಳ ಬೇಕೆಂದರಿದು।
ಮರುತಜಾದ್ಯನುಜರು ತರುಣಿಯರ್ವೆರಸಿ ತಾ
ಪೊರಟನಾ ಯಜ್ಞಕೆಂದು ॥ ೨ ॥

ವಾರ್ಧಕ

ಸೌರಾಷ್ಟ್ರ-ಗುರ್ಜರ-ವಿದೇಹ-ಪಾಂಚಾಲ-ಗಾಂ
ಧಾರ-ಗೌಳವ-ನಿಷಧ-ಪಾಂಡ್ಯ-ಮತ್ಸ್ಯ-ವಿದರ್ಭ
ಕೇರಳ-ಕರೂಷ-ಕೇಕಯ-ಕುರು-ತ್ರಿಗರ್ತ ಮಾಗಧ-ಮಾದ್ರ-ಮಾಳವಗಳ ।
ಕೈರಾತ-ಕೋಸಲ-ತುರುಷ್ಕ-ನೇಪಾಳ-ಹಂ
ವಿಾರ-ಹೇಹಯ-ಸಿಂಧು-ಚೇದಿ-ಚೋಳಾಂಗ-ಸೌ
ವೀರ ಮುಂತಾದ ಬಹುದೇಶಗಳ ನೃಪರಾಮಹಾಧ್ವರಕೆ ನಡೆತಂದರು ೧॥

ಅರಸ ಕೇಳ್ ಕಶ್ಯಪ-ಚ್ಯವನ-ಗಾಲವ-ಪರಾ
ಶರ-ವಾಮದೇವ-ವಿಶ್ವಾಮಿತ್ರ-ಸುಮತಿಯಾ
ಸುರಿಯತ್ರಿ-ವಾಗುರಿ-ಸುಮಂತು-ಕ್ರತುಕವಷ-ಕಣ್ವರ್ಷಿ-ಧೌಮ್ಯಾಗಸ್ತ್ಯರು ।

ವರ ಭರದ್ವಾಜ-ಮೈತ್ರೇಯ-ಮಾರ್ಕಾಂಡೇಯ
ಪರಮಋಷಿ-ಪೈಲ-ಗೌತಮ-ವೀತಿಹೋತ್ರ ಮುನಿ-
ವರ ವಸಿಷ್ಠಾದಿಗಳ್ ಮಿಗೆ ನಿಮಂತ್ರಿತರಾಗಿ ಮಖಶಾಲೆಗೈತಂದರು ॥ ೨ ॥

## ಯಾದವರ ಅತಿಥಿಸತ್ಕಾರ

ಭಾಮಿನಿ

ಬಂದ ಬಂದಾ ಮುನಿ ಮಹೀಸುರ-
ವೃಂದ-ಭೂಪನಿಕಾಯವನು ಕ್ರಮ-
ದಿಂದ ಮನ್ನಿಸಿ ತಾರತಮ್ಯದೊಳವರವರ ಮನಕೆ ।
ಅಂದದಾಗುವ ವಸತಿ-ವಸ್ತ್ರಗ-
ಳಿಂದ ಸತ್ಕರಿಸಿದರು ಬಲ-ಶಿನಿ-
ನಂದನಾದಿಗಳೊಂದು ಭೂರಿ-ಜನಾಳಿಯನು ಬಿಡದೆ ॥

ರಾಗ—ದೇಶಿ; ತಾಳ—ಅಷ್ಟ

(ಧಾಟಿ—ಏನಯ್ಯಾ । ಇಂಥ ।ದೇನಯ್ಯಾ—ಎಂಬಂತೆ)

ಕೇಳಯ್ಯ । ರಾಜ ಕೇಳಯ್ಯ ॥ ಪ ॥
ಕೇಳಯ್ಯ ಯದುಕುಲಜರ ಚಾರಿತ್ರವನು ।
ಕೇಳುವರಘಪರಿಹಾರಮಪ್ಪುದನು ॥ ಅ.ಪ॥

ಹರಿಧನಂಜಯರತ್ತ ಸೈನಿಕ ಸಹಿತ ।
ತುರಗದೊಡನೆ ತಿರುತಿರುಗಿ ಸಮಸ್ತ ॥
ಧರಣಿಪಾಲಕರನು ಗೆಲಿದು ಕಪ್ಪವನು
ಹೊರಿಸುತ್ತೈತಂದರಾ । ಯಜ್ಞಕೆಲ್ಲವನು ॥ ೧ ॥

ಮೊದಲೆ ಸಂಗ್ರಹಿಸಿರ್ದ ಧನಕನಕಗಳ ।
ಅದರ ಮೇಲಖಿಳ ದೇಶಗಳ ಕಪ್ಪಗಳ ॥
ಒದಗಿ ಕೂಡಿಸಿ ರಾಶಿಗೈದರೆಲ್ಲವನು
ಅದರ ಮಿತಿಯನುಸಿರುವನಾವನಿಹನು ॥ ೨ ॥

ಹೊಸ ಹೊಸ ಪಟ್ಟೆ ಪೀತಾಂಬರಾದಿಗಳು ||
ವಸನಂಗಳಿತರ ದ್ರವ್ಯಗಳಮಿತಗಳು ||
ಪಶುಗಳ ಹಿಂಡಗಣಿತ ಕನ್ಯಕೆಯರು
ಎಸೆದವು ದಾನಕೊಪ್ಪುವ ಸಾಹಿತ್ಯಗಳು || ೩ ||

## ನಿಕುಂಭನ ಒಡ್ಡೋಲಗ

ಕಂದಪದ್ಯ

ಧರಣಿಪ ಕೇಳತ್ತಲ್ ಷಟ್-
ಪುರದೊಳ್ ದಾನವನಿಕುಂಭನೊಡ್ಡೋಲಗದೊಳ್ ।
ಮೆರೆದಿರಲಾತನ ಬೇಹಿನ
ಚರರೈತಂದಾ ಖಲಂಗೆ ಮಣಿದಿಂತೆಂದರ್ ||

ರಾಗ—ಸಾರಂಗ ; ತಾಳ—ಅಷ್ಟ

(ಧಾಟಿ—ಕೇಳು ಧರ್ಮಾನುಜಾತ—ಎಂಬಂತೆ)

ಅಸುರೇಂದ್ರ ಲಾಲಿಸಯ್ಯ । ಯಾದವರ ಸಾ-
ಹಸವನೆಲ್ಲವನು ಜೀಯ || ಪ ||
ದ್ವಿವಿದಕಪೀಶ್ವರನು । ತಾ ನಿಮಗಾಗಿ
ಹವಕೈದಲಾತನನು ||
ತವಕದಿ ರಾಮನೆಂಬುವನು ಬಂದಿದಿರಾಗಿ
ಬವರದಿ ಕೊಂದನಂತೆ ॥ ನೀ ಕೇಳ್ಮುಂತೆ || ೧ ||

ದುರುಳ ಯಾದವರೀಗಲು । ಆವರ್ತಾಂಕ
ವರನದೀ ತೀರದೊಳು ||
ಪರಿಪರಿಯೊಡವೆಯ ತರಿಸಿಟ್ಟುಕೊಂಡೊಂದು
ತರದ ಯಜ್ಞವ ಗೈವರು । ಆ ವೀರರು || ೨ ||

ಅಗಣಿತ ವಿತ್ತಂಗಳು । ಹೊನ್ನುಗಳು ಹೆ-
ಣ್ಣುಗಳು ಸುರತ್ನಂಗಳು ||
ಝಗಝಗಿಸುವುವಲ್ಲಿ ವಿಗಡ ನೀನೆಲ್ಲವ
ತೆಗೆದುಕೊಂಡರೆ ಲೇಸಯ್ಯ । ನೀ ಕೇಳಯ್ಯ || ೩ ||

ರಾಗ—ನೀಲಾಂಬರಿ; ತಾಳ—ಏಕ

[ ಧಾಟಿ—ಲಲನೆ ಕೇಳಲೆ ನಿನ್ನ । ದಣಿಸಿದ ಖೂಳರು । ]

ಚರರೆಂದ ನುಡಿಗೇಳಿ । ಕೆರಳಿ ಮಂತ್ರಿಗಳೊಡ-
ನೊರೆದ ಮತ್ಸಖನ ಸಂ । ಹರಿಸಿ ನಿರ್ಭಯದಿ ।
ಅರಿಗಳಿಲ್ಲಿಗೆ ಬಂದು । ಮೆರೆದ ಮೇಲವರನ್ನು
ಮುರಿವೆನೆಂದೆನುತ ಪಲ್ । ಮೊರೆದನಾ ಖಳನು ॥ ೧ ॥

ಬಳಿಕ ನಿಕುಂಭನು । ಕೆಲವು ದೈತ್ಯರನು ಬೆಂ-
ಬಲಕಾಗಿ ಕರಕೊಂಡು । ಚಳಕದಿಂದೈದಿ ।
ಹಲವು ದ್ರವ್ಯಗಳನ್ನು । ಗಳಿಸಿ ಮಾಡುವ ಯದು-
ಕುಲಜರಧ್ವರಕಾರ್ಯ । ದೊಳವನೀಕ್ಷಿಸಿದ ॥ ೨ ॥

ವಿತ್ತರತ್ನಾದಿ ಸ । ಮಸ್ತ ವಸ್ತುಗಳನ್ನು
ಮತ್ತೇಭ-ಹಯಗಳ । ಮೊತ್ತವೆಲ್ಲವನು ।
ಮತ್ತೆ ಧೇನುಗಳ । ನಿತ್ತು ನೋಡುತ ಚೋದ್ಯ-
ವೆತ್ತು ಮಾನಸದೊಳಾ। ದೈತ್ಯನಿಂತೆಂದ ॥ ೩ ॥

ವಾರ್ಧಕ

ಅರರೆ ಗೋವಳ ಮನುಜರಾದವರ ಯಾದವರ
ಗರುವಮಿನಿತುಂಟೆ ಮುನಿವರ್ಗಮಂ ಸ್ವರ್ಗಮಂ-
ದಿರಕೆ ಬಡಿದಟ್ಟುತೀ ಖುಲ್ಲರಂ ಗೊಲ್ಲರಂ ಕದನದೊಳ್ ಸದೆ ಬಡಿವೆನು ।
ಮೆರೆವ ಯಜ್ಞಾಂಗ ಸಂಭಾರಗಳ ವಾರಗಳ
ಪುರಕೆ ಸಾಗಿಸುವೆನಿಭಗತಿಯರಂ ಸತಿಯರಂ
ಪರಿಕಿಸುವೆನೊಲಿದವರ ಚೆಂದಗಳನಂದಗಳನೆಂದು ಮನದಂದನವನು॥

## ಭಾನುಮತಿಯ ಪುನರಪಹಾರ

ಭಾಮಿನಿ

ಅವನು ಬಳಿಕಲ್ಲಿಂದ ಕನ್ಯಾ-
ನಿವಹದೆಡೆಗೈತಂದು ಮಿಗೆ ಭಾ-
ನುವಿನ ಮಗಳನು ಕಂಡು ಕಾಮಾಸ್ತ್ರದಲಿ ಕಳವಳಿಸಿ।

ಇವಳಿಗೋಸುಗ ಮೊದಲೊಳೊಂದಂ
ಗವನು ಕಳಕೊಂಡೆನು ಭಲಾ ಮಗು-
ಳಿವಳಿ ಸಿಕ್ಕಿದಳಿಂದು ಬಿಡೆನೆಂದೆನುತ ಗರ್ಜಿಸಿದ॥

ರಾಗ–ನಾದನಾಮಕ್ರಿಯೆ ; ತಾಳ–ಅಷ್ಟ

ಅನಿತರೊಳಸುರನ ನೋಡುತ್ತ। ಅಂಜಿ
ವನಿತೆಯರತ್ತಿತ್ತಲೋಡುತ್ತ॥
ಘನತೆಗೆಡುವುದನ್ನು ಕಂಡರು। ಭಾನು
ಮನುಮಥಾದ್ಯರು ಖತಿಗೊಂಡರು ॥ ೧ ॥

ತರುಣಿಯರ್ಗಭಯವ ನೀಡುತ್ತ। ಚಾಪ
ಶರಗಳೆಲ್ಲವನಣಿಗೈಯುತ್ತ।
ದುರುಳ ದಾನವನ ಕೊಲ್ಲುವೆವೆಂದು। ಅವ-
ರುರವಣಿಸಿದರಾತನಿದಿರಂದು ॥ ೨ ॥

ಅಳುಕಿದಂದದಲಸುರೇಂದ್ರನು। ಅಲ್ಲಿ
ನಿಲದೆ ಕಾರಡವಿಗೆ ಪೋದನು॥
ನಿಲಿಸಿದನಲ್ಲಿ ತನ್ನವರನ್ನು ಮಾಯಾ-
ಬಲದಿಂದ ಬಲಭದ್ರನಾದನು ॥ ೩ ॥

ಹೆದರಿದನಸುರನೆಂದರಿದರು। ಭಾನು
ಮದನಾದಿಗಳು ಶಾಂತರಾದರು॥
ಮದಿರಾಕ್ಷಿಯರು ಮೋದವಾಂತರು। ತಾವು
ಮೊದಲಿದ್ದ ಕಡೆಯಲ್ಲೆ ಕುಳಿತರು ॥ ೪ ॥

ಬಂದು ಮಾಯದ ಬಲ ಭರದೊಳು। ನಾರೀ-
ವೃಂದವೆಲ್ಲವ ಕಂಡು ಖತಿಯೊಳು॥
ಮುಂದೈದಿ ಎಲ್ಲರ ಜರೆಯುತ್ತ। ಬಳಿ-
ಕೆಂದ ಶೂರಜನನ್ನು ಕರೆಯುತ್ತ ॥ ೫ ॥

ರಾಗ—ಸೌರಾಷ್ಟ್ರ ; ತಾಳ—ಏಕ

(ಧಾಟಿ—ಯಾತಕಿದಕೆ ಸಂದೇಹವು | ಕಾಮಪಾಲ |)

ಬುದ್ಧಿಯೇತಕಿಲ್ಲ ನಿನಗೆ | ಹೇಳು ತಾತ | ನೀನು
ವೃದ್ಧನಾದುದೇತಕಯ್ಯ | ಹೇಳು ತಾತ ||
ಶುದ್ಧ ಮೂಢನಾದೆಯೇನೊ | ಹೇಳು ತಾತ | ಯದ್ವಾ
ತದ್ವಾ ಕಾರ್ಯವಾಯ್ತುಲ್ಲವೆ | ಹೇಳು ತಾತ || ೧ ||

ಖಳರ ಕಾಟವರಿದ ಮೇಲೆ ಹೇಳು ತಾತ | ಯಜ್ಞ-
ಕಳುಕಿ ಕೊಳ್ಳದಿರುವೆಯೇಕೆ | ಹೇಳು ತಾತ ||
ಜಲಜಮುಖಿಯರೆಲ್ಲರೇಕೆ | ಹೇಳು ತಾತ | ಪುರಿಗೆ
ಕಳುಹಿ ಕೊಡದೆ ಕುಳಿತೆಯೇಕೆ ಹೇಳು ತಾತ || ೨ ||

ಇನ್ನು ದನುಜ ಬಾರದಿಹನೆ | ಹೇಳು ತಾತ | ದೊಡ್ಡ
ಸೈನ್ಯವನ್ನು ತಾರದಿಹನೆ | ಹೇಳು ತಾತ ||
ಕನ್ಯೆಯರನು ಕೊಂಡೊಯ್ಯನೆ | ಹೇಳು ತಾತ | ಕಡೆಯೊ-
ಳಿನ್ನಲೇನಾ ಕಷ್ಟವನ್ನು | ಹೇಳು ತಾತಾ || ೩ ||

ರಾಗ—ನೀಲಾಂಬರಿ ; ತಾಳ—ರೂಪಕ

(ಧಾಟಿ—ಶ್ರೀಲೋಲನೆ ಕೇಳ್ ಪಾಂಡವ | ಪಾಲಕನೆಂಬೀ ಬಿರುದನು)

ಇನ್ನಾದರು ನಾನುಸಿರುವ | ದನ್ನಾಲಿಪುದೀ ತರುಣಿಯ-
ರೆನ್ನೊಡನೆಲ್ಲರು ಬರಲಿವ | ರೆನ್ನಾ ದ್ವಾರಕೆಗೆ ||
ಮನ್ನಿಸಿ ನಾಂ ಕರೆದೊಯ್ವುದೆ | ನೆನ್ನಲು ವಸುದೇವನು ದಿಟ-
ವೆನ್ನುತಾಲಾನುಡಿಗೊಪ್ಪಿದ | ನನ್ಯವ ಯೋಚಿಸದೆ || ೧ ||

ಭರದಿಂದಾ ಖಲನಲ್ಲಿಹ | ಹರಿಣಾಕ್ಷಿಯರನು ಬನ್ನಿರಿ
ಪುರಕ್ಕೈದುವ ಎನುತೊಯ್ಯನೆ | ಕರೆಯಲು ಕೇಳುತಲೇ ||
ಹರುಷದೊಳಾತನ ಬೆನ್ನಿಗೆ | ಪೊರಟರು ಭಾನುಜೆ ಮೊದಲಾ-
ಗಿರುವಬಲೆಯರೆಲ್ಲರು ಕೇಳ್ | ಧರಣಿಪ ಕೌತುಕವ || ೨ ||

ನಡೆದನು ಖಳ ದೂರಕೆ ಪಥ। ಪಿಡಿದನು ನಿಜನಗರಿಗೆ ಕಾ-
ರಡವಿಯ ನುಸುಳಿದನಸುರರ। ಪಡೆ ಕೂಡಿರ್ದೆಡೆಗೆ ॥
ನಡೆಯಿರಿ ಬನ್ನಿರಿ ಎನುತಾ। ಜಡಜದಳಾಕ್ಷಿಯರನು ನಿಲ-
ಗೊಡದವಸರದಿಂದಲಿ ಗೋಳ್। ಗುಡಿಸಿದನೇನೆಂಬೆ ॥ ೩ ॥
ನಾರಿಯರಿಗೆ ಪುರಿಗೈದುವ। ದಾರಿಯಿದಲ್ಲೆಂಬುದು ಮನ-
ಕೂರಿತು ಕಲ್ ಮುಳ್ಗಳ ಮೇ। ಲೂರಿದ ಪದಗಳಲಿ ॥
ಸೋರಿತು ರಕುತವು ಮೇಣ್ಸುರ। ವೈರಿಯ ಬಲ ಮುಂಗಡೆಯಲಿ
ತೋರಿತು ಭಯಶೋಕವು। ತಲೆಗೇರಿತು ಬೇಗದಲಿ ॥ ೪ ॥

ಕಂದಪದ್ಯ

ಏನುಸಿರುವೆನವನಿಪ ಕೇಳ್
ಭಾನುಜೆ ಮೊದಲಾದ ಮಂದಯಾನೆಯರಾಗಳ್।
ಆ ನೀಲಾಂಬರ ರೂಪದ
ದಾನವನಂ ಕರೆದು ಕರೆದು ಕೂಗುತ ನುಡಿದರ್ ॥

ರಾಗ—ನೀಲಾಂಬರಿ; ತಾಳ—ಏಕ

(ಧಾಟಿ—ಏನಯ್ಯ ಪವನಜನೇ। ಕೌರವರಿಗೆ। )

ಏನಿದೇನಿದು ಪೇಳಯ್ಯ। ಈ ವಿಪಿನಕೆ
ನೀನೇಕೆ ಬಂದುದಯ್ಯ ॥
ಧ್ಯಾನಿಸಲೆಮ್ಮ ಪುರಿಗೆ ಮಾರ್ಗವಿದಲ್ಲ-
ವೇನನೆಂಬೆವು ನಿನಗೆ ॥ ೧ ॥
ಒಡೆದವೆಮ್ಮಯ ಕಾಲ್ಗಳು। ನಿನ್ನೊಡನಿನ್ನು
ನಡೆಯಲಾರೆವು ನೋಡಲು ॥
ನಡುಗುತ್ತಲಿದೆ ಕಾಯವು। ಮಹಾ ಭೀತಿ
ಹಿಡಿದುದೆಮ್ಮನು ದಿಟವು ॥ ೨ ॥
ಕರುಣವಿಲ್ಲವೆ ನಿನಗೆ। ನಮ್ಮೆಲ್ಲರ
ಮರುಗಿಪುದೇಕೆ ಹೀಗೆ ॥
ದುರುಳ ರಕ್ಕಸರಿರ್ಪರು। ಮುಂಗಡೆಯೊಳೀ
ಪರಿಯೇನೆಂಬುದನುಸಿರು ॥ ೩ ॥

ಹಾ ರಾಮದೇವ ನೀನು । ಇಂತಾದುದು
ಭಾರಿಯಾಶ್ಚರ್ಯವಿನ್ನು ॥
ಕಾರಣವರಿಯೆವೆಂದು । ಅಂಗನೆಯರು
ಚೀರುತ್ತ ಕೆಡೆದರಂದು ॥ ೪ ॥

ವಾರ್ಧಕ

ಅಸುರನಾ ಸಮಯದೊಳಗಂಜದಿರಿ ಮಾರ್ಗ ಮುಂ
ದೆಸೆವುದೊಳದಾರಿಯೀ ಹಳುವವೆನುತುಚಿತೋಕ್ತಿ-
ಯುಸಿರಿ ಮಾಯಾಪ್ರಭಾವದೊಳವರನೆಲ್ಲರಂ ಷಟ್ಪುರಕೆ ಸಾಗಿಸಿದನು ।
ಅಸಮ ನಿಜ ರೂಪಮಂ ಧರಿಸಲಿವನಂ ಕಂಡು
ಶಶಿಮುಖಿಯರಕಟ ಹಾ ಕೆಟ್ಟೆವೆಂದೆನುತ ಶೋ-
ಕಿಸುತಿರ್ದರದನೆಣಿಸದಾತನಾ ವಧುಗಳಂ ಸೆರೆವನೆಯೊಳಡಗಿಸಿದನು ॥ ೧ ॥

ಬಳಿಕವಂ ಯಾದವರ ಸಂಗರಕೆ ತನಗೆ ಬೆಂ
ಬಲವಾದ ನೃಪರಿಗಾ ಮುಖದ ಧನ-ಕನಕ-ಮಣಿ-
ಗಳ ರಾಶಿಸಹಿತಖಿಳ ವಸ್ತುಗಳ ಪಾಲುಗಳನೀವೆನೆಂದಾಪ್ತಜನರ ।
ಕಳುಹಿ ಕೌರವ-ಕರ್ಣ-ಮಗಧಾದಿಸಕಲ ಕಲಿ-
ಗಳಿಗೆ ಸಾರಿಸಿ ಸಮರಕಣಿಗೈಯುತಿರ್ದನಾ
ಬಳಿಕತ್ತ ಭೋಜಕಟಕ್ಕೈತಂದು ರುಕ್ಮಿಗಾಬೇಹಿನವರಿಂತೆಂದರು ॥ ೨ ॥

## ರುಕ್ಮಿಯ ಗತವೈರಸ್ಮರಣ

ರಾಗ—ಮುಖಾರಿ ; ತಾಳ—ಏಕ

(ಧಾಟಿ—ಮಹರಾಜ ಕೇಳ್ವುದು ಕಲಾಪ—ಎಂಬಂತೆ)

ರುಕ್ಮಿಭೂಪಾಲ ಲಾಲಿಸಯ್ಯ । ನಾವೆಂಬ ಪರಿಯ
ರುಕ್ಮಿಭೂಪಾಲ ಲಾಲಿಸಯ್ಯ ॥ ಪ ॥
ಅರಸ ನಿನ್ನ ನೇಮದಿಂದ । ತಿರುಗಿ ತಿಳಿದು ಬಂದೆವೆಂದ ॥
ಹರಿ-ಬಲಮುಖ ಯದು । ವರರಾ ಷಟ್ಪುರ
ಧರೆಯಲಿ ಯಜ್ಞವ । ವಿರಚಿಪರೀಗಲು ॥ ೧ ॥

ಹಲವು ರಾಜರೆಡೆಗೆ ತಿಳಿದು । ಕಳುಹೆ ಲಿಖಿತಗಳನು ಬರೆದು ॥
ನಲಿಯುತ ನೃಪ ಸಂ । ಕುಲವೈತಂದಾ
ಸ್ಥಲದಲಿ ಮುದದಲಿ ನೆಲೆಸಿಹರೀಗಲು ॥ ೨ ॥

ಯಾದವೇಂದ್ರರೊಡನೆ ಮುಳಿದು । ಕಾದಲಾ ನಿಕುಂಭನರಿದು ॥
ಚೇದಿಪ-ಮಗಧ ನೃ । ಪಾದಿಗಳನು ಯು-
ಕ್ತ್ಯಾದರದಲಿ ಸಂ । ಪಾದಿಸಿ ಕೊಂಡಿಹ ॥ ೩ ॥

ಆತನ್ಯಸಹಾಯಕೆಂದೇ । ರೀತಿಯಿಂದ ಪೋಗಿ ಮುಂದೆ ॥
ಆ ತುರುಗಾಹಿಯ ಘಾತಿಸಿದರೆ ವಿ-
ಖ್ಯಾತನು ನೀನಹೆ ಏತಕೆ ಸಂಶಯ ॥ ೪ ॥

ಭಾಮಿನಿ

ಚರರ ನುಡಿಗೇಳುತ್ತ ರೋಷದ
ಭರದಲುಬ್ಬೇರುತ್ತ ತನ್ನಯ
ಶಿರವನುರೆ ತೂಗುತ್ತ ಪೂರ್ವದ್ವೇಷಕಾರಣವ।
ಸ್ಮರಿಸುತೆಡಬಲದಾಪ್ತ ಭಟರನು
ಪರಿಕಿಸುತ ಹೂಂಕರಿಸಿ ಕಂಗಳೊ-
ಳುರಿಯನುಗುಳುತ ಜಡಿದು ಝುಂಕಿಸಿ ರುಕ್ಮಿಯಿಂತೆಂದ ॥

ರಾಗ—ಕಾಂಬೋಧಿ ; ತಾಳ—ಝುಂಪೆ

ಕೇಳಿದಿರೆ ಬಾಂಧವರೆ । ಖೂಳಗೋವಳರೆಲ್ಲ
ಮೇಲಾದ ಯಜ್ಞಕಾರ್ಯವನು ॥
ಆಳುತನದುಜ್ಜುಗವ । ತಾಳಿ ಮಾಡುವರಂತೆ
ಹೇಳಲೇನಿದರೊಳಾನಿನ್ನು ॥ ೧ ॥

ಅರಿಯ ಮಗನಾದರೂ । ಸ್ಮರಗೆನ್ನ ತನುಜಾತೆ
ವರ ಶುಭಾಂಗಿಯನಿತ್ತೆನಲ್ಲಾ ॥
ನೆರೆ ಮಹೋತ್ಸವದೊಳ । ಧ್ವರವನೆಸಗಿದರವರು
ಕರೆಯನಿಲ್ಲಿಗೆ ಕಳುಹಲಿಲ್ಲ ॥ ೨ ॥

ಇಂತವರು ಹಗೆತನದ । ಪಂಥವನೆ ಕಂಡ ಮೇ-
ಲೆಂತು ಸುಮ್ಮನೆ ನಿಲುವೆನಿಲ್ಲಿ ||
ಅಂತರಿಸದ್ದೈದಿ ವಿ । ಕ್ರಾಂತ ನೈಕುಂಭಬಲ-
ವಂತರದಿ ಸೇರಿದಪೆನಲ್ಲಿ || ೩ ||

ಬಳಿಕಾ ನಿಕುಂಭಕನ । ಬಲದಿಂದ ಕೃಷ್ಣಾದಿ—
ಗಳನು ರಣದಲಿ ಹೊಕ್ಕು ಹೊಯ್ದು ||
ತಲೆಗಡಿದು ಭಾಷೆಯನು । ಸಲಿಸಿಕೊಂಡಪೆನೆಂದು
ಚಳಕದಿಂದನುಗೈದನಂದು || ೪ ||

ರಾಗ–ಕಾಪಿ ; ತಾಳ–ಅಷ್ಟ

(ಧಾಟಿ— ಕುರುರಾಯ ಮರುಳಾದ ಸಿದ್ಧ—ಎಂಬಂತೆ)

ಖತಿಯಿಂದ ಖಳ ರುಕ್ಮಿಜಡಿದು । ದಿವ್ಯ
ರಥವೇರಿ ಧನುಶರಾದಿಗಳನ್ನು ಪಿಡಿದು ||
ಚತುರಂಗ ಸೈನಿಕಸಹಿತ । ವಾಯು-
ಗತಿಯಿಂದ ಪೋದನು ಷಟ್ಪುರಕೆನುತ || ೧ ||

ಪೋಗಿ ನಿಕುಂಭನ ಕಂಡು । ಅನು-
ರಾಗದಿಂದವನೊಳು ಮಾತಾಡಿಕೊಂಡು ||
ನಾಗಾರಿಕೇತನಾದಿಗಳ । ಯುದ್ಧ-
ಕಾಗಿ ಸನ್ನದ್ಧನಾಗಿರ್ದನಾ ದುರುಳ || ೨ ||

ವಿತ್ತ ರತ್ನಾದಿಗಳಿಂದ । ಭಾಗ-
ವಿತ್ತಪೆನೆಂದು ಸೂಚಿಸುವುದರಿಂದ ||
ಅರ್ಥಲೋಭದಿ ಕುರುರಾಯ । ಸೂತ-
ಪುತ್ರಾದ್ಯರಸುರಂಗೆ ಬಲವಾದರಯ್ಯ || ೩ ||

ಧನದಾಶೆಯಿಂದಲಿ ಕೆಲರು । ತಮ್ಮ
ಮನದ ವೈರದ ದೆಸೆಯಿಂದಲಿ ಕೆಲರು ||
ದನುಜಬಲಕೆ ಸೇರಿದರು । ಪಾಂಡು-
ತನುಜರು ಹೊರತುಳಿದಖಿಳ ಭೂಮಿಪರು ||

ವಾರ್ಧಕ

ಜನಪ ಕೇಳ್ ದಾನವಂ ದಿತಿಸೇವೆಗಿರಿಸಿರ್ದ
ಮುನಿರೂಪವಮಂ ತೆಗೆದು ನಿಜರೂಪಕೊಂದಿಸುತ
ದನುಜಬಲದಿಂ ಕೌರವಾದ್ಯರ ಸಹಾಯದಿಂ ಯಾದವರ ಸಂಗ್ರಾಮಕೆ ।
ಅನುಗೈಯುತಿರಲಿತ್ತಲಂದದಿಂ ನಂದಗೋ-
ಪನ ಬಿಡಾರದೊಳೈದಿ ಪ್ರಿಯದ ಮಾತಾಡಿ ಆ
ದನುಜಾರಿಯಗ್ರಜಂ ಮುಖಶಾಲೆಗೈತರಲ್ ಭಾನು ಕರೆದಿಂತೆಂದನು ॥

## ಭಾನು-ಬಲರಾಮರಲ್ಲಿ ಕಲಹ

ರಾಗ—ಸೌರಾಷ್ಟ್ರ ; ತಾಳ—ಏಕ

(ಧಾಟಿ—ಕಂಡುದನಾಡಿದರೆ ಖಾತಿ। ಗೊಂಡು ಕುಣಿಯಲೇತಕಣ್ಣ।)

ಹಿರಿಯತಂದೆ ಕೇಳಿಲ್ಲಿಂದ । ತರುಣಿಯರನು ಕೂಡಿಕೊಂಡು
ತೆರಳಿದಾತನೆಲ್ಲಿ ಬಿಟ್ಟು ತಿರುಗಿದೆಯೀಗ ॥
ಮರುಳೆ ಬರಿದೆ ಎನ್ನೊಳಿಂದು । ಸರಸವೇನೊ ನಿನಗೆ ನಾರಿ-
ಯರನು ಕಂಡು ನುಡಿಸಿದಂಥ । ಪುರುಷನಾವನು ॥ ೧ ॥

ದನುಜಭೀತಿಯಿಲ್ಲಿ ಕನ್ಯಾ । ಜನವನೊಯ್ವೆನೆನುತಲೆಮ್ಮ
ಮನೆಗೆಂದವರನೊಯ್ದೆಯಲ್ಲಾ । ಘನತೆಯಿಂದಲೇ ॥
ಮುನಿದು ನುಡಿದನೆಲವೊ ನಿನ್ನ । ಮನಕೆ ಭ್ರಾಂತಿಯೇರಿತೆನ್ನೊ-
ಳಿನಿತು ಸಟೆಯನೊರೆವೆಯೇತ । ಕೆನುತ ಪೇಳೆಲೋ ॥ ೨ ॥

ತಲೆಗೆ ಭ್ರಾಂತಿಯೇರಿತಹುದು । ತಿಳಿದುದೆನಗಂತಿರಲಿ ನಮ್ಮ
ಲಲನೆಯರನದೆಲ್ಲಿಗೊಯ್ದೆ । ತಿಳುಹು ನಿಜವನು ॥
ಮುಳಿದು ಬಾಯ್ಗೆ ಬಂದ ತೆರದಿ । ಗಳಹಬೇಡ ಪೆಟ್ಟುಕೊಟ್ಟು
ಹಲುಗಳನ್ನು ಮುರಿವೆ ನಿನ್ನ । ನೆಲವೊ ಮರುಳನೆ ॥ ೩ ॥

ಹಿರಿಯನಾಗಿ ಹೋದೆಯಲ್ಲ । ದಿರಲು ನಿನ್ನ ಹೆಮ್ಮೆಯೆಲ್ಲ
ಮುರಿಯುತಿದ್ದೆನಿಂತು ನ್ಯಾಯ । ವರಿಯದುಸಿರುವೆ ॥

ಹರ ಹರ ಏನೆಂಬೆ ನೀನು । ತರಳನತ್ತ ಸಾರು ಜನಕ-
ನೊರೆಯಲೀಗ ನ್ಯಾಯವಾರೊಳಿರುವುದೆಂಬುದ ॥ ೪ ॥

ರಾಗ–ಕೇದಾರಗೌಳ ; ತಾಳ–ಅಷ್ಟ

ವಸುದೇವ ನುಡಿದನು । ಮುಸಲಧರನೆ ನೀನು
ಶಶಿವದನೆಯರನಿಂದು ॥
ಅಸುರರ ಭಯವ ತ । ಪ್ಪಿಸುವೆನೆಂದೊಯ್ದುದು
ಪುಸಿಯಲ್ಲ ಸಹಜವೆಂದು ॥ ೧ ॥

ಮುಪ್ಪಿನ ಭ್ರಾಂತಿಯೊ । ಸ್ವಪ್ನದ ಬೋಧೆಯೊ
ಬೊಪ್ಪ ನೀ ನುಡಿದುದನು ॥
ತಪ್ಪದೆಂದನು ರಾಮನು ॥ ೨ ॥

ಉತ್ತಮ ದ್ವಿಜ ಬ್ರಹ್ಮ । ದತ್ತನಾಗಲೆ ಕೃಷ್ಣ-
ಪುತ್ರನ ಮಾತುಗಳು ॥
ಮತ್ತೆಮ್ಮ ವಸುದೇವ । ನುಕ್ತಿಗಳೆಲ್ಲವು
ಸತ್ಯವೆಂದುಸಿರಿದನು ॥ ೩ ॥

ಎಲ್ಲರೂ ಪೇಳ್ವರು । ಸುಳ್ಳನೀ ಕಾಲದೊ-
ಳಿಲ್ಲಿಹ ಮುರಹರನು ॥
ಎಲ್ಲವನಾತಗೆ । ಸೊಲ್ಲಿಸಿ ಪೋಗುವೆ
ನಿಲ್ಲೆನೆಂದೊದರಿದನು ॥ ೪ ॥

ಅದನು ಕಂಡಲಿರ್ದ । ಬುಧರು-ಕೃಷ್ಣಾರ್ಜುನ-
ಮದನಾದ್ಯರೇನಿದೇನು ॥
ಇದು ಚಿತ್ರವಾಯಿತೆಂ । ಬುದರೊಳಗರಿದು ನಾ-
ರದ ಮುನಿಯೈತಂದನು ॥ ೫ ॥

ರಾಗ—ಧನ್ಯಾಶ್ರೀ ; ತಾಳ—ಏಕ

ನಾರಾಯಣ ಹರಿ ನೀರಜಲೋಚನ
ಚಾರು ಚರಿತ ಕರುಣಾಕರ ॥ ಪ ॥

ಪಾರಾವಾರಗಭೀರ ಪರಾತ್ಪರ
ಮುರಾರಿ ಸುರಾರಿ ಭೀಕರ ‖ ಅ.ಪ ‖

ವಾಸುಕಿಶಯನ ಮಹೇಶಾನಪ್ರಿಯ
ವಾಸವ ಮುಖ ಸುರಪೂಜಿತ ।
ಕೇಶವ ದುರಿತ ವಿನಾಶ ವಿದಾರಿತ-
ಕುಶೀಲ ಸುಶೀಲರಾಜಿತ ‖ ೧ ‖

ದಾಮೋದರ ನಿಃಸೀಮ ಧುರಂಧರ
ನಾಮ ಸಹಸ್ರ ವಿಕಾಶಿತ ।
ಕಾಮಿತಫಲದ ನಿರಾಮಯ ನೀರದ-
ಸಮಾಂಗ ರಮಾಂಗನಾಶ್ರಿತ ‖ ೨ ‖

ಆನತ ಜನ ಸುರಧೇನು ಜರಾಮರ-
ಹೀನಚರಾಚರಜೀವಿತ ।
ನಾನಾಕಾರ ಸದಾನಂದಾಮೃತ
ಸುನೀತ ವಿನಿತೇ ಭಾವಿತ ‖

## ನಾರದಾಗಮನ

ಕಂದಪದ್ಯ

ಸುರಮುನಿಯಿಂತೈತರಲಾ-
ದರದಿಂ ಸತ್ಕರಿಸೆ ಶೂರಜಾದಿಗಳೆಲ್ಲರ್ ।
ಪರಿಕಿಸುತಾರಾಮಾದ್ಯರ
ಪರಿಯಂ ನಸುನಗುತ ನುಡಿದನವರಿಗೆ ಮುನಿಪಂ ‖

ರಾಗ—ಘಂಟಾರವ; ತಾಳ–ಏಕ

(ಧಾಟಿ—ಎಂದು ಕಪಟದ ವಿಪ್ರ ನುಡಿಯಲು—ಎಂಬಂತೆ)

ಕೇಳಿರೆಲ್ಲರು ದುಗುಡವನು ಬಿಟ್ಟು । ನಿಮಗಾದುದೆಲ್ಲವ
ಪೇಳುವೆನು ನಾನೀಗ ಮನಗೊಟ್ಟು ‖
ಖೂಳನುಜನಿಕುಂಭಮಾಯಾ-

ಶೀಲದಲಿ ಬಲನಾಕೃತಿಯನೇ
ತಾಳಿ ಬಲನೀಯೆಡೆಯೊಳಿಲ್ಲದ
ಕಾಲದೊಳಗೈತಂದನಿಲ್ಲಿಗೆ ॥ ೧ ॥

ಬಂದು ಕಾಲೋಚಿತದ ಮಾತಿನಲಿ । ಎಲ್ಲರಿಗು ರಾಮನೆ
ಎಂದು ತಿಳಿವಂತೆಸಗಿ ಬಳಿಕಿನಲಿ ॥
ಸುಂದರಿಯರನು ಮಂದಿರಕ್ಕೊಯ್-
ದೊಂದು ಕಡೆಯಲಿ ಬಂಧನಾಲಯ-
ಕೊಂದಿಸಿದನದರಿಂದಲೇ ನಿಮ-
ಗಿಂದಿನಿತು ಬರುವಂದವಾಯಿತು ॥ ೨ ॥

ಒದಗಿ ಬಂದೀವಚನಕಲಹದೊಳು । ಯಾರಿಂದಲೂ ತಾ-
ನುದಿಸಲಿಲ್ಲನ್ಯಾಯವಿಂದಿನೊಳು ॥
ಇದು ಯಥಾರ್ಥವು ಹೃದಯದಲಿ ಕೂ-
ಡಿದ ವಿಷಾದವನೊದೆದು ಕಳೆಯಿರಿ
ಮುದವ ತಾಳಿರಿ ಬದಲೆಣಿಸದಾ
ಸುದತಿಯರ ತರುವುದಕೆ ತೊಡಗಿರಿ ॥ ೩ ॥

ಮತ್ತೆ ಕೇಳಿರಿ ಖಳನಿಕುಂಭಕನು । ನಿಮ್ಮೊಡನೆ ಕಾದುವ
ಕೃತ್ಯಕೋಸುಗ ಸಕಲಭೂಪರನು ॥
ವಿತ್ತದಾಶೆಯನಿತ್ತು ಕರೆಕೊ-
ಳ್ಳುತ್ತಬರುತಿಹನಿತ್ತಲೀ ನುಡಿ
ಸತ್ಯ ನೀವೀ ಹೊತ್ತಿನೊಳಗೆ-
ಚ್ಚತ್ತು ನಡೆಯಿರೆನುತ್ತ ಪೇಳ್ದನು ॥ ೪ ॥

## ಯಾದವರ ಯುದ್ಧಸನ್ನಾಹ

ರಾಗ-ನೀಲಾಂಬರಿ ; ತಾಳ-ರೂಪಕ

ಸುರಮುನಿವಚನದೊಳರಿತು ಸತ್ಯವ ರಾಮು
ಹರುಷದಿ ಮುನಿಗೆ ಭೂಸುರಗೆ ತಾತನಿಗೆ ॥

ಎರಗಿ ನಿಮ್ಮನು ನಾನು ಜರೆದ ದೋಷವನೆಲ್ಲ
ಮರೆಯ ಬೇಕೆನುತುಪಚರಿಸಿದನಾಗ ॥ ೧ ॥

ಅನಿತರೊಳ್ ತನ್ನ ತಪ್ಪನು ಕರುಣದಿ ಪಾಲಿ-
ಸೆನುತೆರಗಿದ ಭಾನುವನು ಹಲಧರನು।
ವಿನಯದಿ ಮನ್ನಿಸೆ ದನುಜಾರಿ ಮಿಾನ ಕೇ-
ತನ ಮುಖ್ಯರಾನಂದವನು ತಾಳ್ದರಲ್ಲಿ ॥ ೨ ॥

ಜಲಜಾಕ್ಷನುಡಿದನಾ ಬಳಿಕ ರಾಕ್ಷಸರೊಳು
ಸಿಲುಕಿ ಶೋಕಿಪರೆಮ್ಮ ನಳಿನ ನೇತ್ರೆಯರು।
ಖಳನಿಕುಂಭಾದ್ಯರ ಕಲಹಕ್ಕೆ ಯಾದವ
ಬಲವೆಲ್ಲವೇಳಲಿಯಳುಕದಿನ್ನೆನುತ ॥ ೩ ॥

ವಾರ್ಧಕ

ಮಾರ-ಭಾನು-ಸುಭಾನು-ವತಿಭಾನು ಪ್ರತಿಭಾನು
ಚಾರು ದೇಷ್ಣ-ಸುದೇಷ್ಣ-ಶ್ರೀಭಾನು-ವಸುಮಂತ
ಚಾರು ಚಂದ್ರ-ಸುಮಿತ್ರ-ಸಾಂಬಕ-ವಿವಸು- ವೃಷ-ಬೃಹದ್ಭಾನು-ಚಂದ್ರ
ಭಾನು
ಚಾರುಗುಪ್ತಕ-ಚಾರುಮಂತ-ವಿಜಯದ್ರವಿಣ
ವೀರಬಲಸಿಂಹ- ವೃಕಗೃಧ್ರ-ಭದ್ರ ಪ್ರಬಲ
ಶೂರ ಸ್ವಭಾನು-ಸೋಮಕ-ಶಾಂತಿ ಶ್ರುತಿಯಶ್ವಸೇನ-ಧೃತಿಶಂಕು-
ಜಯನು ॥ ೧ ॥

ಸತ್ಯಕ-ಸುಭದ್ರನನ್ನಾದ-ಬಹ್ವನ್ನ-ಪುರು-
ಜಿತ್ತುವಪರಾಜಿತ ಮಹಾಶಕ್ತಿ-ಪವನ ಶತ
ಜಿತ್ತು-ಕ್ರತುಚಂದ್ರ-ಚಿತ್ರಗು-ವೇಗವಂತನಸು-ವರಿಜಿತ್ತು-ವಾಮುವಹ್ನಿ।
ಚಿತ್ರಕೇತು-ಮಹಾಶನಾಯುಸ್ಸ-ಸಂಗ್ರಾಮ-
ಜಿತ್ತುವರ್ಕಾನಿಲ-ಕ್ಷುಧಿದರ್ಶ-ಸಾಹಸ್ರ
ಜಿತ್ತು ಸಹನೂರ್ಧ್ವಗ-ಬೃಹತ್ಸೇನರಿಂತಿವರ್ ಕೃಷ್ಣನಂದನರೆದ್ದರು ॥ ೨ ॥

ಭಾಮಿನಿ

ವಿಕಟಬಲ-ಗದ-ಸಾರಣರು-ಸ-
ತ್ಯಕನು-ಭೋಜನು-ಪೃಥು-ವಿಪೃಥು-ದಂ-
ಷ್ಟ್ರಕನು-ಕಲಿವೈತರಣ-ನಿಶಠೋನ್ಮುಖರನಾದೃಷ್ಟಿ ।
ಸುಕೃತಿಯಕ್ರೂರೋದ್ಧವರು-ಸಾ-
ತ್ಯಕಿ-ನಿಚಕ್ಷು-ವಿಕದ್ರು-ಕೃತವ-
ರ್ಮಕನುಷಾಪತಿ ಮುಖ್ಯಯಾದವರೆದ್ದರುರುಬಿನಲಿ ॥

ರಾಗ—ಭೈರವಿ; ತಾಳ—ತ್ರಿಪುಟ

(ಧಾಟಿ—ಬರುತ ಭೀಷ್ಮದ್ರೋಣಕೃಪರಿಗೆ—ಎಂಬಂತೆ)

ಅರಸ ಕೇಳ್ ಬಳಿಕವರು ಕರದಲಿ
ಸುರಗಿ-ಮುಸಲ-ಮುಸುಂಡಿ-ಘನ-ಮು-
ದ್ಗರ-ಕಠಾರಿ-ಕುಠಾರ-ಶಲ-ತೋ-
ಮರ-ಗದಾಂಕುಶ-ಪಾಶ-ಕಕ್ಕಡ
ಪರಿಘ-ಶೂಲ-ಪ್ರಾಸ-ಸೃಗಭೀ-
ಕರ-ಕೃಪಾಣ-ಶಿರಾದಿ-ಕಾರ್ಮುಕ
ಉರುಶಿಳೀಮುಖ-ಶಕ್ತಿಯುಬ್ಬಣ
ಕಿರಸೆ-ಚಕ್ರಾದಿಗಳ ಧರಿಸಿದರ್ ಏನನೆಂಬೆ । ನಾನದ । ನೇನನೆಂಬೆ ॥ ೧ ॥

ಭೇರಿ-ಕಾಹಲ-ಢಕ್ಕೆ-ಡಮರು-ನ-
ಗಾರಿ-ಡಿಂಡಿಮ-ಭದ್ರ-ಜರ್ಝರ
ಘೋರಭೀಷಣ-ಕೊಂಬು-ಶಂಖ-ಗ
ಭೀರ-ನಿಸ್ಸಾಳಾದಿ ವಾದ್ಯ ಮ-
ಹಾರವಗಳಿಂದಿಭ-ತುರಗ-ಪರಿ-
ವಾರ-ಮಾಗಧವಂದಿಗಳ ವಿ-
ಸ್ತಾರ ಜಯಘೋಷದಲಿ ಸಕಲರು
ತೇರನೇರಿದು ಪೊರಟರಾಗಲೆ ಏನನೆಂಬೆ । ನಾನದ । ನೇನನೆಂಬೆ ॥ ೨ ॥

ಅಧ್ವರದ ರಕ್ಷಣೆಗೆ ರಾಮ-ವಿ-
ಕದ್ರು-ಕೌಂತೇಯರನು ನಿಲ್ಲಿಸಿ
ಅದ್ರಿಧರನುಳಿದಖಿಳರೊಡನೆ ಸ-
ಮೃದ್ಧ ಸಂಗರ ಸಂಗ್ರಹದೊಳಾ
ಯುದ್ಧಕೈದಿದನನಿತರೊಳು ಖಳ-
ನೆದ್ದನತ್ತಲು ಚೈದ್ಯ-ಮಾಗಧ
ಮಾದ್ರ-ಕೌರವ-ಕರ್ಣ-ಶಕುನಿ-ಜ-
ಯದ್ರಥಾದ್ಯರ ಮೇಳದುಬ್ಬಿನೊಳ್ ಏನನೆಂಬೆ। ನಾನದ। ನೇನನೆಂಬೆ ॥೩॥

ಹಸ್ತಿರಥ-ಹಯರಥ-ವಿಯದ್ರಥ
ಮತ್ತರಥ-ಖರರಥ-ಮಹೀರಥ
ಮೃತ್ಯುಮುಖ-ದುರ್ಮುಖ-ಬಹಿರ್ಮುಖ
ಸತ್ಯನಾಶಾದ್ಯಸುರ ಕೋಟಿಯ
ಮೊತ್ತವನುಸರಿಸಿತು ನಿಕುಂಭನ-
ನತ್ತಲಿತ್ತಲು ನೋಡುತಾರ್ಭಟಿ-
ಸುತ್ತ ಭೀಕರದಾಯುಧಗಳನು
ಹಸ್ತದಲಿ ಪಿಡಿದಾಗ ಝಳಪಿಸು ತೇನನೆಂಬೆ । ನಾನದ। ನೇನನೆಂಬೆ ॥೪॥

## ನಿಕುಂಭಬಲದೊಡನೆ ಯಾದವ ಯುದ್ಧಾರಂಭ

(ರಾಗ— ಪಂತುವರಾಳಿ; ತಾಳ—ಮಟ್ಟೆ)

(ಧಾಟಿ—ಆರೆಲೋನೃಪಾಲ ಕುವರನೇ—ಎಂಬಂತೆ)

ಕೇಳು ಧರಣಿಪಾಲತಿಲಕನೇ । ಮುಂಗಥೆಯನು
ಕೇಳು ಧರಣಿಪಾಲತಿಲಕನೇ ॥ ಪ ॥

ತ್ರಿದಶರಿಪು ನಿಕುಂಭ ಸೈನ್ಯವದುಭುತಾಂಗದಿಂದಲಿಂತು
ಕದನಕೆಂದು ಪೊರಡಲಾಗ ಯದುವರೇಣ್ಯ ಹರಿಯ ಸುಭಟ-
ರುದಧಿಘೋಷದಿಂದ ಗಜರುತ ॥ ಖಳರ ಯಮನ
ಸದನಕಟ್ಟಬಿಡುವೆನೆನ್ನುತ ॥ ಸರಳ ಮಳೆಯ
ಕೆದರುತುರುಬಿ ಫಡಫಡೆನ್ನುತ ॥ ಬಂದರಾಗ ॥ ೧ ॥

ಘಟಿಸಿತವರಿಗಾಜಿಯುಭಯ ಭಟರ ಬೊಬ್ಬೆಹಯಮದೇಭ-
ಘಂಟೆಯ ಘನ ವಿರಾವ ಭೇರಿ ಪಟಹವಾದ್ಯಘೋಷವಾರು-
ಭಟಿಸಿ ಹೊಕ್ಕು ಹೊಯ್ವರವಗಳು ॥ ಕಮಲಜಾಂಡ
ಘಟವಿದೊಡೆಯದುಳಿಯದೆಂಬೊಲು ॥ ಮೊಳಗಿತಮರ-
ಕಟಕ ತಲ್ಲಣಿಸಿತು ನಭದೊಳು ॥ ಪೇಳಲೇನು ॥ ೨ ॥

ಬಳಿಕ ಮದನ ಭಾನುಸಾಂಬ ಬಲಸುಮಿತ್ರ ಮುಖ್ಯರ ಸುರ
ಬಲವನಸ್ತ್ರ ಶಸ್ತ್ರಗಳಲಿ ಕೊಲುತ ಮುಂದೆ ಮುಂದೆ ಕವಿಯ-
ಲಳುಕದಸುರಸುಭಟರೊದಗುತ ॥ ಯಾದವರನು
ಮುಳಿದು ಮೆಟ್ಟಿ ಕುಟ್ಟಿರೆನ್ನುತ ॥ ಹಲವು ಶಸ್ತ್ರ
ಗಳಲಿ ಕೊಲುತ ಬಂದರುರುಬುತ ॥ ಭೀಕರಿಸುತ ॥ ೩ ॥

ದುರಿತಮತಿನಿಕುಂಭನಿದಿರೊಳಿರದೆ ಮರೆಯೊಳಿದ್ದು ಕವಿದು
ಬರುವ ಯಾದವಾಳಿಯನ್ನು ಪರಿಘದಿಂದ ಬಡಿಯುತಿರ್ದ-
ನರಿಯದಾ ಮನೋಭವಾದ್ಯರು ॥ ಅವನ ದುರ್ಗ-
ಕುರುಬಿ ತರುಬಿ ನುಗ್ಗುತಿರ್ದರು ॥ ದನುಜರನ್ನು
ಶರಗಳಿಂದ ಕೆಡಹುತಿರ್ದರು ॥ ಏನನೆಂಬೆ ॥ ೪ ॥

ವಾರ್ಧಕ

ಸುರಲೋಕದಂತೆ ದಿತಿಸುತ ರಿಪುಬಲಾನ್ವಿತಂ
ಹರವಕ್ತ್ರದೋಲ್ ಹಂಸಹರಿಶಿಖ್ಯಲಂಕೃತಂ
ಸರಸಿಯೋಲ್ ಶರಜಾತಸಂಘಾತ ಸಂಯುತಂ ನೆರೆ ಮಹಾರಣ್ಯದಂತೆ।
ಕರವೀರವಾರಣಸ್ಯಂದನಾದ್ಯಾಶ್ರಿತಂ
ಸರಸಿರುಹವನದೋಲ್ ಶಿಳೀಮುಖಧ್ವನಿಯುತಂ
ಶರನಿಧಿಯವೋಲ್ ಭಯಾನಕಘೋಷಯುತವಾಗಿ ತದ್ರಣಾಂಗಣ
ಮೆಸೆದುದು ॥ ೧ ॥

ಮರೆಯೊಳಿರ್ದಾ ನಿಕುಂಭಕನಚ್ಯುತಾತ್ಮಜರ-
ನೊರಗಿಸಿದ ನೈನೂರನುರುಗಜಸಹಸ್ರಮಂ
ಮೆರೆವ ಹಯಗಳನೆರಡುಸಾವಿರವನುರುಳಿಸಲ್ ಕಂಡುಳಿದ ಯದುವೀರರು।

ಜರಿದು ಭೀತಿಯೊಳಳುಕುವಂದವಂ ಕಂಡಸುರ
ಹರನವರಿಗಭಯಮಂ ಕೊಡುತ ಘನಘೋರಕೇ
ಸರಿಯಂತೆ ಗರ್ಜಿಸುತ ಪಡೆವೆರಸಿ ಮುಂದೈದಿ ಕಣೆಗರೆಯುತಿಂತೆಂದನು ॥

## ಕೃಷ್ಣನ ಪತನ

ರಾಗ-ಭೈರವಿ; ತಾಳ-ಅಷ್ಟ

ಎಲವೊ ದಾನವನೆ ಕೇಳೋ। ಮಾಯಕದಿಂದ
ಕೊಲುವುದು ತರವೆ ಹೇಳೋ ॥
ಬಲವಂತನಾದರೆ। ನಿಲು ಮೋರೆದೋರೆನ್ನ
ಕಲಹಕೆಂದೆನುತೆಚ್ಚನು ॥ ೧ ॥
ಅಸುರರ ತಂಡಗಳು। ಬಂದುದು ಬಾಣ-
ವೆಸುತಾತನಿದಿರಿನೊಳು ॥
ಬಿಸಜಾಂಬಕನು ಬಾಣ। ವಿಸರದಿಂದವರ ಮ-
ರ್ದಿಸುತಿದ್ದನುರವಣಿಸಿ ॥ ೨ ॥
ಅತ್ತ ನಿಕುಂಭಕನು। ಮೈದೋರದೆ
ಯುಕ್ತಿಯಿಂ ಪರಿಘವನು ॥
ಎತ್ತಿ ಕಂಸಾರಿಯ। ಮಸ್ತಕದಲಿ ಸರ್ವ-
ಶಕ್ತಿಯಿಂದೆರಗಿದನು ॥ ೩ ॥
ಪರಿಘಪ್ರಹಾರದೊಳು। ಅಚ್ಯುತನಿಳೆ-
ಗೊರಗಿ ನಿಶ್ಚೇಷ್ಟೆಯೊಳು ॥
ಇರಲು ಯಾದವ ಸೇನೆ। ಯೊರಲಿದುದಕಟೆಂದಾ
ಪರಿಯನೆಂತುಸಿರುವೆನು ॥ ೪ ॥

ಕಂದಪದ್ಯ

ಪಾರಿಕ್ಷಿತ ಕೇಳೈನರ-
ಕಾರಿಯ ದುರ್ದಶೆಯ ನೀಕ್ಷಿಸುತಲತಿಭಯದೊಳ್।
ಚಾರಕರೈತಂದಾಹಲ-
ಧಾರಿಯ ಬಳಿಗಾತಗೆರಗಿ ಪೇಳಿದರಾಗಳ್ ॥

ರಾಗ—ಮಾರವಿ ; ತಾಳ–ಅಷ್ಟ

(ಧಾಟಿ—ಜೀಯ ಲಾಲಿಪುದೆಮ್ಮ ಬಿನ್ನಪವ—ಎಂಬಂತೆ)

ರಾಮದೇವನೆ ಕೇಳೆಮ್ಮ ನುಡಿಯ ॥
ಸಾಮಿಯೆಮ್ಮಲಿ ॥ ಪ್ರೇಮದ ಭಯವ
ನೀ ಮೊದಲೆ ಕೊಡಿ । ಸೀ ಮುಹೂರ್ತದಿ ॥ ಪ ॥

ಇಂದು ಖೂಳ ನಿಕುಂಭನ ಪುರಕೆ ।
ಮಂದಿ ಮಾರ್ಬಲವೆರಸಿ ಬೆಂಬಲಕೆ ।
ಇಂದಿರೇಶ್ವರಾದಿಗಳೈದಿ ರಣಕೆ ॥
ಬಂದ ರಾಕ್ಷಸ । ಬೃಂದವನು ಸಲೆ
ಕೊಂದು ಕೆಡಹುತ । ಮುಂದುವರಿದರು ॥ ೧ ॥

ನಡೆಯುತ್ತಿರ್ದರಂತವರು ಮುಂಗಡೆಗೆ ।
ಹೊಡೆಯುತ್ತಿರ್ದರು ಖಳರಲ್ಲಿ ಕಡೆಗೆ ।
ಮಡಿಯುತ್ತಿರ್ದರೆಮ್ಮವರಡಿಗಡಿಗೆ ॥
ಒಡೆಯ ಕೃಷ್ಣನು ॥ ಕಡುಗಿ ಹಾಯ್ದರೆ
ಬಡಿದು ಕೊಂದರು । ನುಡಿಯಲಾರೆವು ॥ ೨ ॥

ಭಾಮಿನಿ

ಚಾರಕರ ನುಡಿಗೇಳುತಾಗಲು-
ದಾರಬಲ ಬಲಭದ್ರನಂದಿನ
ನಾರಸಿಂಹನೊ ವಿಲಯ ರುದ್ರನೊ ಹೇಳಲರಿದೆನು ।
ಭೂರಿ ಕೋಪಾಟೋಪದಲಿ ಕಲೆ-
ಯೇರಿ ಕಿಡಿಕಿಡಿಯಾಗಿ ಬೊಬ್ಬಿರಿ-
ದಾರುಭಟಿಸುತ ನುಡಿದನಿಂದ್ರಾದಿಗಳು ತಲ್ಲಣಿಸೆ ॥

ರಾಗ—ಸೌರಾಷ್ಟ್ರ; ತಾಳ ತ್ರಿಪುಟ

ಫನಿದೇನಿದು ಕಾಲಗತಿಯ ವಿಧಾನವೆನ್ನನುಜಾತನನುಖಲ
ದಾನವರು ಮಡುಹಿದರೆ ತಿಳಿಯೆ ನ-
ವೀನವಿಂದು ॥ ೧ ॥

ಹೊಡೆದುಹೊಯ್ದಪ್ಪಳಿಸಿ ಹಲದಲಿ। ದಡಿಗದಾನವಸೇನೆಯನು ಬಲಿ
ಗೊಡುವೆ ನಾ ಭೂತಾಳಿಗೀಗಲೆ
ತಡೆವೆನೆಂತು ॥ ೨ ॥

ಹೇಳಿ ಫಲವೇನೆನುತಲಾ ದನು । ಜಾಲಯಕೆ ಗಮಿಸಿದನು ತಮ್ಮನ
ಶೀಲವನು ನೆನೆನೆನೆಯುತಾ ಬಲ
ಶಾಲಿ ಬಳಿಕ ॥ ೩ ॥

ಕಂಡನುರೆ ಕಣ್ಣಾರಳಿ ಬಿದ್ದಿಹ। ಪುಂಡರೀಕದಳಾಕ್ಷನನು ಭ್ರಮೆ-
ಗೊಂಡು ಕಳವಳಿಸುತ್ತ ಹಲುಬಿದ
ಚಂಡಬಲನು ॥ ೪ ॥

## ಬಲರಾಮನ ಶೋಕ

ರಾಗ ನೀಲಾಂಬರಿ ; ತಾಳ-ರೂಪಕ

(ಧಾಟಿ-ಏತಕೆ ಮಲಗಿದೆ ರಥದಲಿ । ಮಾತುಗಳಾಡದೆ)

ಏತಕೆ ತಮ್ಮನೆ ಸುಮ್ಮನೆ । ಭೂತಳದಲಿ ಮಲಗಿದೆ ನೀ
ಮಾತಾಡಿಲ್ಲಿಹೆ ನಿನ್ನಯ। ಪ್ರೀತಿಯ ಪೂರ್ವಜನು ॥
ದೈತೇಯರ ಬಲವಿಲ್ಲಿದೆ। ಘಾತಿಸು ಬೇಗೇಳಕಟಾ
ಈತೆರದಲಿ ಮೌನವ್ರತ। ರೀತಿಯೆ ಪೇಳೆನಗೆ ॥ ೧ ॥

ಧುರದಲಿ ಕಂಸನ ಹಂಸನ। ಮುರನರಕಾದ್ಯಸುರೌಘವ
ಮುರಿದ ಪರಾಕ್ರಮವೀದಿನ। ತೊರೆದುದೆ ನಿನ್ನನ್ನು ॥
ಧರಣಿಯ ಭಾರವನಿಳುಹಿದ। ವರಪುಣ್ಯವು ತೊಲಗಿತೆಗೋ
ಸರಣಿಯು ಸಲಹಿದ ಸುಕೃತವು। ತೆರಳಿತೆ ನಿನ್ನಗಲಿ ॥ ೨ ॥

ನಾರಾಯಣನೆಂಟನೆಯವ। ತಾರದವನು ನೀನೆಂದುವಿ-
ಚಾರಾತ್ಮರು ಪೇಳುವ ನುಡಿ। ತೀರಿತೆ ಹಾ ವಿಧಿಯೇ ॥
ದ್ವಾರವತೀಪುರಿಯೆಂಬುದು। ವಾರಿಧಿಗಾಯಿತೆ ನಿನ್ನಯ
ನಾರಿಯರೆಂತುಳಿವರು ಪೇಳ್। ವೀರಶಿರೋಮಣಿಯೆ ॥ ೩ ॥

ಮುಳಿಸೇಕೆನ್ನೊಳು ಮಾತಾ । ಡೆಲೆ ತಮ್ಮನೆ ಮಾತಾಪಿತೃ-
ಗಳು ಕರೆವರು ನುಡಿಸವರನು । ಗೆಳೆಯನು ಕಲಿಪಾರ್ಥ ॥
ನಲಿಯುತ ಬಂದಿಹ ನೋಡೆನು । ತಲುಗಿಸುತಪ್ಪುತ ಹರಿಯನು
ಹಲವನು ವರ್ಣಿಸುತಾ ಬಲ । ಹಲುಬಿದನೀ ತೆರದಿ ॥ ೪ ॥

## ಕೃಷ್ಣನ ಶಕ್ತ್ಯವತಾರ

ರಾಗ-ತೋಡಿ; ತಾಳ-ತ್ರಿಪುಟ

(ಧಾಟಿ-ಕೇಳು ನೃಪ ಕೆಲವಿಹುದು ನಿನ್ನಲಿ । ಪೇಳತಕ್ಕುದು)

ಅರಸಕೇಳೈ ಸಕಲ ಯಾದವ-
ಸರಣಿ ಹಾಹಾ ಎನ್ನುತಿರಲ-
ಧ್ವರದ ಶಾಲೆಯೊಳಿಲ್ಲರಿದ ಕೇಳ್ದು ।
ಮರುಗಿದರು ಪಾಂಡವರು ಭರದಲಿ
ಹರಿಯು ಬಳಿಗೈತಂದು ಕಾಣುತ
ಕರಗಿದರು ಘನಶೋಕವನು ತಾಳ್ದು ॥ ೧ ॥

ತ್ರಿದಶರಭ್ರದೊಳೀಕ್ಷಿಸುತ ಮರು-
ಕದಲಿ ನೊರೆಯಿಡಲಿಂದ್ರನಚ್ಯುತ
ಮದನ ಮುಖ ಯಾದವನಿಕಾಯದಲಿ ।
ಒದಗಿ ಪೀಯೂಷಾಂಬುವನು ಸುರಿ-
ಸಿದನು ವೈಮುರಿದೆದ್ದರೆಲ್ಲರು
ಮುದದಿ ನಿದ್ರೆಯಲೇಳ್ವರೀತಿಯಲಿ ॥ ೨ ॥

ಶೌರಿ ನೈಜ ಮನ ಸಮಾಧಿಯ
ಸೇರಿಕೆಯೊಳರಿದೆಲ್ಲವನು ವೈ-
ದೋರಿಸಿಂದನು ಶಕ್ತಿರೂಪದಲಿ ॥
ಭೇರಿ ಕಾಹಲ ವಾದ್ಯಜಯರವ-
ವೇರೆ ಸಾಕ್ಷಾಲ್ಲಕ್ಷ್ಮಿಯಂತೆ ಮು-
ರಾರಿ ಯೆಸೆದನು ಯುದ್ಧರಂಗದಲಿ ॥ ೩ ॥

ವಾರ್ಧಕ

ಹೊಳೆವ ಪೀತಾಂಬರದ ನಿರಿಯುಡಿಗೆ ಚಾರು ಮೇ-
ಖಲೆ ಹೀರಹಾರ ಕೇಯೂರಗಳ ಮಕರ ಕುಂ
ಡಲ ಮಣಿ ಕಿರೀಟಗಳ ತೊಡಿಗೆಯಿಂ ಶಂಖಚಕ್ರಗದಾಬ್ಜ ಹಸ್ತಗಳಲಿ ॥
ಜ್ವಲಿಸೆ ಸಾಕ್ಷಾಲ್ಲಸಲ್ಲಕ್ಷ್ಮೀ ಸ್ವರೂಪಮುಂ
ತಳೆದು ನಿಂದಿಹ ದೇವನಂ ಕಂಡು ಚೋದ್ಯದಿಂ
ಹಲಧರಾದಿಗಳೀಕ್ಷಿಸುತ್ತಿರಲ್ಕೆಲ್ಲರಂ ಕಂಡು ಹರಿಯಿಂತೆಂದನು ॥

ರಾಗ—ಪಂತುರಾವಳಿ; ತಾಳ–ಏಕ

(ಧಾಟಿ—ಕೇಳಿರಯ್ಯಾ ॥ ನೀವು । ಕೇಳಿರಯ್ಯಾ—ಎಂಬಂತೆ)

ಕೇಳಿರಯ್ಯಾ । ಸಕಲರು । ಕೇಳಿರಯ್ಯಾ ॥ ಪಲ್ಲ ॥

ಕೇಳಿರಯ್ಯಾ ನಿಮಗೆ ನಾನು । ಪೇಳುವ ಮಾತಗಳನೀಗ ॥ ಅ.ಪ ॥

ಹಿಂದೆ ತ್ರಿಪುರದಹನದಲ್ಲಿ । ಬೆಂದುಹೋಗದುಳಿದರಸುರ-
ರಂದದೀ ನಿಕುಂಭಮುಖ್ಯ । ರೊಂದು ಲಕ್ಷವು ॥
ಮುಂದೆ ಷಷ್ಟಿ ಜನರು ತಪಕೆ । ನಿಂದವರು ಲಕ್ಷವರುಷ-
ದಿಂದಲಜನನೊಲಿಸಿಕೊಂಡ । ರಂದು ಯಾಚಿಸಿದರು ವರವ ॥ ೧ ॥

ಕಲನಿಕುಂಭ ಮೂರು ರೂಪ । ಗಳನು ಮತ್ತೆ ಘೋರ ಮಾಯೆ-
ಗಳನು ಪುರುಷರಿಂದ ತನಗೆ ಕೊಲೆಯು ಬಾರವ ॥
ಬಲವ ಬೇಡಿಕೊಂಡನುಳಿದ । ಖಳರು ಕೇಳ್ದರಧಿಕ ಶಕ್ತಿ
ಗಳನದೆಲ್ಲ ಕೊಟ್ಟವರ್ಗೆ । ಬಳಿಕಲಜ ನಿಕುಂಭಗೆಂದ ॥ ೨ ॥

ಮತ್ತನಾಗಿ ಪೀಡಿಸಲ್ ತ್ರಿ । ಮೂರ್ತಿಯೊಬ್ಬನನ್ನು ವಿಷ್ಣು-
ಶಕ್ತಿಯಿಂದ ಮರಣ ನಿನಗೆ । ನುತ್ತ ಬ್ರಹ್ಮನು ॥
ಅತ್ತ ನಡೆದನಿವರು ಬಂದ । ರಿತ್ತ ಷಟ್ಪುರಕ್ಕೆ ಗರ್ವ-
ಯುಕ್ತರಾಗಿ ಮೆರೆದರಸುರ । ಭಕ್ತರನ್ನು ಕೂಡಿಕೊಂಡು ॥ ೩ ॥

ರಾಗ-ಕಾಂಬೋಧಿ; ತಾಳ-ಅಷ್ಟ

(ಧಾಟಿ-ಎಲೆ ಭೂಪ ಚಿಂತೆಬೇಡ | ಪಾಂಡುವರು ತಾ-ಎಂಬಂತೆ)

ಗಾಂಧರ್ವರೂಪವೊಂದು । ತಾಪಸರೂಪ-
ವೊಂದು ದೈತ್ಯಾಂಗ ವೊಂದು ||
ಅಂದದೊಳೀ ಮೂರ | ಹೊಂದಿ ನಿಕುಂಭಕ-
ಬಂದು ಸಜ್ಜನ । ವೃಂದ ಕುಪಹತಿ
ತಂದ ಲೋಕದ | ನಿಂದೆಗಳುಕದೆ || ೧ ||

ಮುನಿರೂಪದಲಿ ದಿತಿಯ | ಸೇವಿಸುವನು
ದನುಜರೂಪದಿ ಕ್ಷಿತಿಯ ||
ಜನರ ಪೀಡಿಸುತಿರ್ಪ । ಮನೆಯಲ್ಲಿ ಗಾಂಧರ್ವ
ತನುವಿನಲಿ ಮಾ-ನಿನಿಯರನು ಮನ-
ದನುವನೋಡದೆ । ದಣಿಸಿ ನಲಿವನು || ೨ ||

ಕಳಕೊಂಡನೊಂದನಂದು | ಮತ್ತೊಂದ ತಾ-
ನೆಳಕೊಂಡನಾತ್ಮಕಿಂದು ||
ಉಳಿದನೊಂದೇ ರೂಪ । ದೊಳಗೀತನಿವನನ್ನು
ಕೊಲುವ ಶಕ್ತಿಯ । ಚೆಲುವ ಮೂರ್ತಿಯ
ತಳೆದೆ ನಾನೇ ನಳಿನನೇತ್ರನು || ೩ ||

ತ್ಯಕ್ತಜೀವಿತನವೊಲು । ಬಿದ್ದವನಾಗಿ
ಚಿತ್ತಸಮಾಧಿಯೊಳು ||
ದೈತ್ಯನ ಪರಿಯನೀ | ಹೊತ್ತಿನೊಳರಿದೆನು
ಸತ್ಯವಿದು ಮುಂ | ದೊತ್ತಿ ನಿಲುವುದು
ಮತ್ತೆ ಯುದ್ಧಕೆ | ನುತ್ತ ನುಡಿದನು || ೪ ||

ಭಾಮಿನಿ

ಎನಗೆ ಬಹುತರ ಪೀಡೆಯಿತ್ತನು
ದನುಜನದರಿಂದೀಗಲೀತನ
ತನುವ ಕಳಚುವೆನುಳಿದ ನಕ್ತಂಚರ ಭಟಾವಳಿಯ |

ಆನುವರವನೀವೆಸಗಬಹುದೆಂ
ದೆನಲು ಕೇಳುತ ಪರಮಹರುಷದ
ವನಧಿಯಲಿ ಮುಳುಗಿದುದು ಯಾದವಪಾಂಡವಸ್ತೋಮ ॥

ವಾರ್ಧಕ

ಅರಸಕೇಳ್ ತೋಷದಿಂ ರಣವಾದ್ಯ ಘೋಷದಿಂ
ದಿರದೆ ಬಲಮದನ ಮುಖ್ಯ ಯಾದವರ್ ಕದನ ಮುಖ-
ದರಿಗಳಂ ಕರೆಯುತ್ತ ಸರಳ ಮಳೆಗರೆಯುತ್ತ ತೊಡಗಿದರ್ ಸಂಗರವನು ।
ಹರಿಶಕ್ತಿಯುಗ್ರದಿಂ ರಥವೇದುರ್ ಶೀಘ್ರದಿಂ
ನರಸಮನ್ವಿತನಾಗಿ ಶರಚಾಪಯುತನಾಗಿ
ಭರದೊಂದು ಪೀಳಿಯಂತೆಸುತ ದನುಜಾಳಿಯ ಕೊಲುತರಸಿದಂ
ಹಗೆಯನು ॥ ೧ ॥

ಮಾರುತಿಗೆ ಮಗಧನುದ್ಧವನಿಗನು ವಿಂದ ನ-
ಕ್ರೂರಂಗೆ ವಿಂದನುಲ್ಮುಖನಿಗೆ ತ್ರಿಗರ್ತದಾ
ಸಾರಣಗೆ ಸೈಂಧವಂಗದಗೆ ಶಿಶುಪಾಲನಾ ಸಾತ್ಯಕಿಗೆ ಭಗದತ್ತನು ।
ವೀರಪೃಥುವಿಗೆ ಸುದಕ್ಷಿಣನೂರ್ಧಗಂಗೆ ಗಾಂ
ಧಾರಂ ಸ-ಭದ್ರಂಗೆ ಜಲಸಂಧನಿಂತು ಬಹು
ವೀರರ್ಗೆ ರಾಕ್ಷಸರ ಪಕ್ಷದೊಳ್ ಧರಣಿಪರ್ ತಾಗಿದರ್ ಸಂಗ್ರಾಮದೆ ॥೨॥

ಬಿಲ್ಲ ಹಿಡಿದಿಲ್ಲಿಬಾ ನಿಲ್ಲೀಗ ಕೊಲ್ಲುವರ-
ನೆಲ್ಲರಂ ಚೆಲ್ಲಬಡಿ ಬಲ್ಲೆಹದೊಳಲ್ಲಿ ಪೊಗು
ಗೆಲ್ಲಲಿದು ಸಲ್ವುದೈ ಬಲ್ಲಿದರದೆಲ್ಲಿಹರಿದಲ್ಲಿಂಬು ಸಲ್ಲಾಪಕೆ ।
ತಲ್ಲಣಿಪುದಲ್ಲಿ ಭಯವಿಲ್ಲ ಬಿಡು ಮಲ್ಲಭಟ-
ರಲ್ಲೋಲ ಕಲ್ಲೋಲ ಮಲ್ಲಿರ್ಪುದಿಲ್ಲಿರ್ಪು-
ದಿಲ್ಲೆಂಬ ಸೊಲ್ಲುಗಳ ಗುಲ್ಲಿಂದ ಬಿಲ್ಲಾಳ್ಗಳುಲ್ಲಾಸದಲ್ಲೊದಗಿತು ॥ ೩ ॥

ರಾಗ-ಕಾಂಬೋಧಿ; ತಾಳ-ಝಂಪೆ

ಧರಣೀಂದ್ರಲಾಲಿಸೀ । ಪರಿಯಾಜಿಗೈಯುತಿರ-
ಲರಸರೊಳು ಸೋತವರ ಬಿಗಿದು ।

ಮೆರೆವ ಷಟ್ಪುರದ ಕಂ । ದರದೊಳಿಡುತಿರ್ದರಾ
ಸ್ಮರಭಾನುದೇವರನುವರಿದು ॥ ॥ ೧ ॥

ಇದ್ದ ಗುಹೆಯಿಂದಲವರೆದ್ದು ಹೋಗದವೊಲನಿ-
ರುದ್ಧನನು ಕಾವಲಿಗೆ ನಿಲಿಸಿ ।
ಉದ್ದಂಡ ಭಟರೊದಗು । ತಿದ್ದರುತ್ಸಾಹದಲಿ
ಯುದ್ಧಕಾತ್ಮಿಕ ಸೈನ್ಯವೆರಸಿ ॥ ೨ ॥

ಅತ್ತಲಾ ರುಕ್ಮಿನೃಪ । ಶಕ್ತಿಯನು ಕಂಡು ಹರಿ-
ಯುತ್ತಮ ರಥಾಂಗಸಂಗ್ರಹದಿ ।
ವರ್ತಿಪಳು ನಾರಿಯೀ । ವೃತ್ತಿ ಚೋದಿಗವಹುದೆ-
ನುತ್ತ ನುಡಿಸಿದನು ಸಂಭ್ರಮದಿ ॥ ೩ ॥

## ಶಕ್ತಿ-ರುಕ್ಮಿಗಳ ಕಾಳಗ

ರಾಗ ಭೈರವಿ; ತಾಳ-ಏಕ

(ಧಾಟಿ-ಖಂಡವಿಲ್ಲದ ಪುಣ್ಯವನು । ಸೂರೆ । ಗೊಂಡವ ತಾನೋ ನರನೋ)

ಸರಸಿಜಮುಖಿ ನೀನ್ಯಾರೇ । ಸುರು । ಚಿರಮಣಿಗಣಶೃಂಗಾರೇ ।
ಹರಿಯ ರಥಾದಿಗಳಿಂದ । ನೀ । ಮೆರೆದಪೆಯೇನಿದರಂದ ॥ ೧ ॥

ಎನ್ನನು ಕೇಳುವ ನೀನು । ಯಾ । ರೆನ್ನೊಳು ಪೇಳ್ವುದಿದೇನು ।
ಅನ್ಯಾಯದ ಕದನದಲಿ । ಯಾ । ಕೆನ್ನುತಬಹೆಯಿಂದಿನಲಿ ॥ ೨ ॥

ಅತ್ಯನ್ನತಬಲ ರುಕ್ಮಿ । ನಾ । ನಿತ್ತಲು ಕೇಳ್ ಕಮಲಾಕ್ಷಿ ।
ಮಿತ್ರನಿಕುಂಭನ ಹಿತಕೆ । ಮನ । ವಿತ್ತೈತಂದೆನು ರಣಕೆ ॥ ೩ ॥

ವಿನುತ ಚರಾಚರಕುಕ್ಷಿ । ಹರಿ । ಯನುಗಾಮಿನಿ ಜಯಲಕ್ಷ್ಮಿ ।
ಎನುವರು ಜನರೆನಗವನು । ರಥ । ಧನುವಾದಿಗಳನಿತ್ತಿಹನು ॥ ೪ ॥

ಪುಸಿಯನು ಪೇಳುವೆಯೇನು । ರಾ । ಕ್ಷಸರಿಪುವಲ್ಲವೆ ನೀನು ।
ವಿಷಮಸ್ತ್ರೀರೂಪದಲಿ । ಧುರ । ವೆಸಗುವೆಯೇಕಿಂದಿನಲಿ ॥ ೫ ॥

ತರುಣಿಯೆನುತಲೆನ್ನನು । ಬಿಡು । ತಿರುವ ಸುಭಟರೆಲ್ಲರನು ।
ಮುರಿಯಲು ಸುಖವಹುದೆಂದು । ಈ । ತೆರದಲಿ ಬಂದಿಹೆನಿಂದು ॥ ೬ ॥

ರಾಗ-ಭೈರವಿ; ತಾಳ-ಅಷ್ಟ

ವೇಷದಿಂದಬಲೆಯೆಂದು | ಬಿಟ್ಟಪೆನೆನು | ತಾಶಿಸಬೇಡವಿಂದು ।
ಓಸರಿಸದೆ ನಿನ್ನ । ನಾಶಗೈದಪೆನೆನ್ನ ! ಭಾಷೆಯ ನೋಡೆಂದನು ॥ ೧ ॥

ಕಂಡಿರ್ಪೆ ಮುನ್ನ ನಾನು । ಎನ್ನಾಜಿಯೊಳ್ । ಮಂಡಿತನಾದುದನು ।
ಭಂಡರಂದದಿ ಭ್ರಮೆ । ಗೊಂಡು ಮತ್ತೇಕೆ ಮುಂ । ಕೊಂಡುಬಂದಿಹೆ
ಯೆಂದನು ॥ ೨ ॥

ಮುನ್ನಿನ ಭಟತನದ । ರೀತಿಯಿದಲ್ಲ । ಕಿನ್ನರ ಸಿಂಹನಿಂದ
ಉನ್ನತ ಶರವಿದ್ಯೆ। ಯನ್ನು ವಿಜಯಧನು । ವನ್ನು ಹೊಂದಿಹೆನೆಂದನು ॥೩॥

ತೊಡು ನಿನ್ನ ವಿಜಯದೊಳು। ಬಾಣಗಳನ್ನು। ಭಿಡೆಯವೇಕಿಂದಿನೊಳು।
ನುಡಿಯ ಹೆಮ್ಮೆಯನೀಗ। ಬಿಡಿಸುವೆ ನಿನಗೆಂದು। ತಡೆಯದಸ್ತ್ರಗಳೆಚ್ಚನು
॥ ೪ ॥

ಜಾರಚೋರತ್ವದೊಳು। ದ್ರವ್ಯಂಗಳ। ನೂರೂರ ಜನಗಳೊಳು।
ಸೂರೆಗೊಂಡಿರುವ ಹಂ। ಕಾರಕ್ಕೆ ಕಡೆಗಾಲ। ದೋರುವೆನೆನುತೆಚ್ಚನು॥
॥ ೫ ॥

ಸುಡು ನಿನ್ನ ಬಾಳಿಕೆಯ । ವಿತ್ತಾಶೆಯೊಳ್। ಕೆಡುಕ ದಾನವಪತಿಯ
ಅಡಿಯನಾಶ್ರಯಿಸಿ ಎ । ಮ್ಮೊಡನೆ ಯುದ್ಧಕೆಬಂದೆ । ಫಡ ಹೋ
ಗೆಂದೆನುತೆಚ್ಚನು ॥ ೬ ॥

ಭಾಮಿನಿ

ಬಂದೆ ಮಾತಾಡದಿರು ನಿನ್ನಯ
ಶಿರವನರಿವೆನು ನಿಲ್ಲೆನುತ ಬೊ-
ಬ್ಬಿರಿದು ಹರಿಗವನೆಚ್ಚನುಗಿದೈನೂರು ಬಾಣಗಳ ।
ಬರುವ ಬಾಣಾಳಿಯನು ಕಡಿದೆಲೆ
ಮರುಳೆ ನಿನ್ನಯ ಜೀವದಾಶೆಯ
ತೊರೆದುಕೋ ಎನುತೆಚ್ಚನಚ್ಯುತ ಶರಸಹಸ್ರಕವ ॥

ರಾಗ – ಶಂಕರಾಭರಣ; ತಾಳ-ಮಟ್ಟೆ

ಪೊಡವಿಪಾಲ ಕೇಳು ಶಕ್ತಿಯಸ್ತ್ರಹತಿಯೊಳು ।
ತಡೆಯದವನು ಮೂರ್ಛೆಯಿಂದ ಬಿದ್ದನಿಳೆಯೊಳು ॥
ಕಡೆಗೆ ಶಕ್ತಿದೇವಿಯಸುರ ಕುಲವನಿರಿಯುತ ।
ಕಡುಗಿ ಹಾಯಲಾ ನಿಕುಂಭನನ್ನು ಹುಡುಕುತ ॥ ೧ ॥

ಇತ್ತ ಚೇತರಿಸುತಲೆದ್ದು ರುಕ್ಮಿಯಾಗಲೇ ।
ಶಕ್ತಿಯಿರವನೆಲ್ಲ ಕಂಡು ಕೋಪಗೊಳುತಲೇ ॥
ಎತ್ತಪೋಪೆ ಎಲವೊ ಕಪಟ ನಿಲ್ಲೆನುತ್ತಲೇ ।
ಮತ್ತೆ ಮೇಲುವಾಯ್ದನಾತ ಶರವನೆಸುತಲೇ ॥ ೨ ॥

ಕೆರಳುತಾ ಮುರಾರಿ ಎಲವೊ ವೈಗೆ ತಾಗದ ।
ಸರಳಿವೇಕೆ ಗುರುಗಳಿಂದ ಪಡೆದ ಮೋಘದ ॥
ಶರಗಳಿದ್ದರುಗಿಯೆನುತ್ತಲೆಸಲು ಭರದಲಿ ।
ಉರುಬಿ ರುಕ್ಮಿ ಕ್ರೂರ ಶರವನೆಚ್ಚ ಖತಿಯಲಿ ॥ ೩ ॥

ವಾರ್ಧಕ

ಕೆರಳಿದು ವಿದರ್ಭನನಲಾಸ್ತ್ರಮಂ ಹರಿ ವರುಣ-
ಶರವನವನಹಿ ಕಲಂಬವನೀತನುರಗಾರಿ-
ಶರವನವನದ್ರಿ ಬಾಣವನೀತನೈಂದ್ರಮಂ ತಿಮಿರ ಮಾರ್ಗಣವನವನು ।
ಹರಿ ರವಿಶಿಳೀಮುಖವನವನಭ್ರವಿಶಿಖಮಂ
ವರ ಮರುತ್ಸಾಯಕವ ನೀತನಾತಂ ಬ್ರಹ್ಮ-
ಶರವನೆಸಲಚ್ಯುತಂ ವೈಷ್ಣವಾಸ್ತ್ರವನುಗಿದನಿಂತೆಲ್ಲವಂ ಗೆಲ್ದನು ॥

ರಾಗ — ಸೌರಾಷ್ಟ್ರ ; ತಾಳ-ತ್ರಿಪುಟ

ಭಳಿಭಳಿರೆ ಗೋವಳನೆ ಬಾಣಾ । ವಳಿಯೊಳಗಸದಳನು ನೀ ಹೆ-
ಕ್ಕಳಿಸದಿರು ನಿಲು ತೋರ್ಪೆನೆನ್ನಯ । ಕಲಿತನವನು ॥ ೧ ॥

ಎನುತ ನಿಜಗುರುದತ್ತ ರೌದ್ರಾ । ಶನಿಶರವನಾ ವಿಜಯಸಂಜ್ಞಕ
ಧನುವಿನಿಂದುಗಿದೆಚ್ಚನಾತನು । ಮುನಿದು ಬೇಗ ॥ ೨ ॥

ತರಣಿತೇಜದೊಳುರಿಯನುಗುಳುತ । ಬರುವ ಶರವನು ಶೌರಿ ಕರದಲಿ
ಮುರಿದು ಬಿಸುಟನು ಸೇನೆಯತ್ಯಾಶ್ಚರಿಯಗೊಳಲು ॥ ೩ ॥

ಅಸ್ತ್ರನಿಷ್ಫಲವಾಗೆ ಚಾಪವ । ನೆತ್ತಿಹೊಯ್ಯಲು ಬಂದನವನಾ
ದೈತ್ಯರಿಪು ಸೆಳಕೊಂಡನದನತಿ । ಯುಕ್ತಿಯಿಂದ ॥ ೪ ॥

ರಾಗ—ಕಾಂಬೋಧಿ; ತಾಳ—ಝಂಪೆ

ಗದೆಖಡುಗ ಮೊದಲಾದ । ವಿಧವಿಧಾಯುಧಗಳಿಂ
ದೊದಗಿ ಹೋರಿದನವನು ಮುಳಿದು ।
ಆದನೆಲ್ಲವನು ಶೌರಿ । ಕದನದಲಿ ಸೆಳಕೊಂಡು
ಮದಮುಖನಿಗುಸುರಿದನು ಜರೆದು ॥ ೫ ॥

ತೀರಿತೇ ನಿನ್ನಬಲ । ವೀ ರಣಾಗ್ರದಿ ನಿನ್ನ-
ನಾರು ಕಾವರು ಕೊಂದರಿಂದು ।
ನಾರಿ ರುಕ್ಮಿಣಿಯಳುವ ಕಾರಣದಿ ಬಿಡುವೆನೀ
ಸಾರಿನ್ನು ಬಂದಪಥವಿಡಿದು ॥ ೬ ॥

ನಿನ್ನ ಕೈದುಗಳೆಲ್ಲವನ್ನೀವೆ ತೆಗೆದುಕೊ-
ಳ್ಳೆನ್ನುತಾತನಿಗಸುರಹರನು ।
ಧನ್ವಾದಿಯಾಯುಧಗ । ಳನ್ನು ಕೊಟ್ಟರಿನಿಕರ-
ವನ್ನು ಕೊಲ್ಲುತತ್ತಲೈದಿದನು ॥ ೭ ॥

## ರುಕ್ಮಿಯ ಬಂಧನ

ರಾಗ—ನಾದನಾಮಕ್ರಿಯೆ; ತಾಳ—ಅಷ್ಟ

(ಧಾಟಿ—ಎಲೆ ಪಾರ್ಥ ಕೇಳು ನೀ ತರಳನು—ಎಂಬಂತೆ)

ಬಳಿಕಲಾ ರುಕ್ಮಿ ಲಜ್ಜಿತನಾಗಿ । ತನ್ನ । ಪೊಳಲಿಗೆ ಪೋಗಲುದ್ಯತನಾಗಿ ।
ಬಳಲುತೈದುವುದನಾಯೆಡೆಯುಲ್ಲಿ । ಕಂಡು ಮಲೆತರು ಮಾರಭಾನುಗಳಲ್ಲಿ ॥ ೧ ॥

ಕಾದಲು ಕಾಲವಲ್ಲೆನುತ । ರುಕ್ಮಿ । ಹೋದನು ತವಕದೊಳೋಡುತ್ತ ।
ಆಧೀರರವನ ಬೆನ್ನಟ್ಟುತ್ತ । ಹೋಗಿ । ಮೂದಲಿಸಿದರಡ್ಡಗಟ್ಟುತ್ತ ॥ ೨ ॥

ಮಾವಯ್ಯ ನೀನೆಲ್ಲಿಗೈದುವೆ । ಬಂಧು । ಭಾವವಬಿಡುವುದು ಚೆಂದವೇ ।
ನಾವು ಷಟ್ಪುರದೊಳಗುಹೆಯಲ್ಲಿ । ಒಂದು । ಠಾವನು ನಿನಗೆ ಮಾಡಿಹೆವಲ್ಲಿ
॥ ೩ ॥

ಮನೆಯಂತೆ ಸೌಖ್ಯದೊಳಲ್ಲಿರು । ಈಗ । ಳೆನುತಲಾತನ ಬಿಗಿದೊಯ್ದರು ।
ಘನತರ ಗುಹೆಯೊಳಗಿಟ್ಟರು । ಕಾಯು । ಲನಿರುದ್ಧನಿಗೆ ತೋರಿಕೊಟ್ಟರು
॥ ೪ ॥

## ಕರ್ಣಭಾನುಗಳಲ್ಲಿ ಕದನ

ಭಾಮಿನಿ

ಕ್ಷಿತಿಪ ಕೇಳಾ ರುಕ್ಮಿ ಧರಣೀ-
ಪತಿಯನವರೀ ತೆರದಿ ಭಂಗಿಸಿ
ಗತಿಗೆಡಿಸಿ ಸೆರೆವಿಡಿದು ಷಟ್ಪುರಗುಹೆಯೊಳಿಡುತಿರುವ ।
ಕೃತಿಯ ನೋಡುತ ನಳಿನಬಾಂಧವ-
ಸುತನು ರೋಷಾವೇಶಮನದು-
ನ್ನತಿಯೊಳಸ್ತ್ರವನೆಸುತ ಭಾನುವಿಗೆಂದನಿದಿರಾಗಿ ॥

ರಾಗ–ಮಾರವಿ; ತಾಳ–ಏಕ

ಎಲೆ ಭಾನುವೆ ಕೇಳ್ । ಬಳಲಿದ ರುಕ್ಮಿಯು । ಗೆಲಿದಿಹ ಗರ್ವಿಕೆಯ ।
ಇಳಿಸುವೆನೊಂದರೆ । ಗಳಿಗೆಯೊಳೀಕ್ಷಿಸು । ಕಲಿಕರ್ಣನ ಬಗೆಯ ॥ ೧ ॥

ಪನ್ನಿಯ ಭಟನೀ । ನೆನ್ನುವದೆಲ್ಲವ । ಮುನ್ನವೆ ತಿಳಿದಿಹೆನು ।
ಎನ್ನೊಡನಾವುದ । ಕನ್ಯಾಯದ ರಣ । ಕೆನ್ನುತ ಬಹೆ ನೀನು ॥ ೨ ॥

ಕಳ್ಳರು ನೀವ್ ನಿ । ಮ್ಮಲ್ಲಿ ವಿಚಾರಿಸ । ಲೆಲ್ಲಿಯ ನೀತಿಗಳು ।
ಮಲ್ಲಕ್ಷಾತ್ರಗೆ । ಸಲ್ಲದೆ ರಣವೆಲೆ । ಖುಲ್ಲಮನುಜ ಪೇಳು ॥ ೩ ॥

ಸೂತನ ಮಗನೀ । ನೇತರ ಕ್ಷತ್ರಿಯ । ಧೂರ್ತನ ಸೇವೆಯಲಿ ।
ಆತ್ಮವ ಹೊರಕೊಂ । ಬಾತನು ಹೋಗೆಲೆ । ಪಾತಕಿ ಬೇಗದಲಿ ॥ ೪ ॥

ಫಡ ಫಡ ಗೊಲ್ಲನ । ಹುಡುಗನೆ ನಿಂದಿಸಿ । ನುಡಿದೈ ಎನಗೀಗ ।
ಕಡಿದಿಕ್ಕುವೆ ನಿ । ನ್ನೊಡಲಿನ ಕರುಳನು । ಪಿಡಿಯದೆ ನಿಲುಬೇಗ ॥ ೫ ॥

ತೋರಿಸು ನೀಚನೆ । ಶೌರ್ಯವನೆನುತಾ । ಧೀರನು ಬೊಬ್ಬಿರಿದ ।
ನಾರಾಚವನಿ । ನ್ನೂರನು ಕವಿಸಿದ । ನಾ ರವಿಜಗೆ ಮುಳಿದು ॥ ೬ ॥

## ಕರ್ಣನ ಬಂಧನ

ರಾಗ–ಶಂಕರಾಭರಣ; ತಾಳ–ಮಟ್ಟೆ

(ಧಾಟಿ–ಎನಲು ರಾಮನು । ಎಸಲು ಪಾರ್ಥನು–ಎಂಬಂತೆ)

ಎಚ್ಚ ಶರಗಳ । ನೆಲ್ಲ ಕರ್ಣನು । ಕೊಚ್ಚಿಕೋಲ್ಗಳ । ಮಳೆಯ ಕರೆದನು ॥
ಅಚ್ಯುತಾತ್ಮಜ । ನಗಣಿತಾಸ್ತ್ರವ । ಎಚ್ಚನಾಗಲೇ । ನೆಂಬೆ ಶೌರ್ಯವ ॥ ೧ ॥

ಕ್ರೂರಶರಗಳ । ಕವಿಸಿ ಕರ್ಣನ । ತೇರು-ಕುದುರೆ-ಚಾ । ಪಗಳನಾತನ ॥
ಸಾರಥಿಯನು ತಾ । ಮುರಿದು ಕೆಡಹುತ । ಘೋರನವನನು ।
ಹಿಡಿದನುರುಬುತ್ತ ॥ ೨ ॥

ಸ್ಮರಸಹಾಯದಿ ಭಾನುವಿನಜನ । ಚರಣಕರಗಳ । ಬಿಗಿದುದನುಜನ -
ಪುರದ ಗುಹೆಯೊಳ । ಗೊಯ್ದು ಕೆಡಹಿದ । ತಿರುಗಿಬಂದು ಸಂ ।
ಗರಕೆ ತೊಡಗಿದ ॥ ೩ ॥

## ಕೌರವ ಪ್ರವೇಶ

ಕಂದಪದ್ಯ

ತರಣಿಜನಂ ಬಿಗಿದಿಡುವಾ
ಪರಿಯಂ ಪರಿಕಿಸುತ ಕೋಪದುರವಣೆಯಿಂದಂ ।
ಕುರುಪತಿ ಧನುಶರವಿಡಿದತಿ
ಭರದಿಂದಾ ಹರಿಕುಮಾರಕರ್ಗಿಂತೆಂದಂ ॥

ರಾಗ—ಸಾಂಗತ್ಯ; ತಾಳ-ರೂಪಕ

ಭಳಿರೆ ಬಾಲರೆ ನಮ್ಮ ಗೆಳೆಯ ಕರ್ಣನನಿಂದು
ಗೆಲಿದ ಗರ್ವವ ಬಿಡಿರೀಗ ।
ಕಲಿಕುರುಪತಿ ನಾನು ಮುಳಿದು ಬಂದಿಹೆನೆನ್ನ
ಬಲವ ನೋಡಿರಿ ಎಂದನಾಗ ॥ ೧ ॥

ಮಿತ್ರನ ಜತೆಯಲ್ಲಿ ಸ್ವಸ್ಥದಿಂದಿರು ನಿನ್ನ-
ನತ್ತಲೊಯ್ದಪೆವೆಂದು ಭರದಿ ।
ಚಿತ್ರಜ-ಭಾನುಗಳುತ್ತರವೀಯೆ ಕೇ-
ಳುತ್ತ ಬಂದನು ರಾಮು ಜವದಿ ॥ ೨ ॥

ಅರಸ ಕೌರವನ ಸಂಗರವೆನಗೆನುತ ಹಿಂ
ದಿರಿಸುತ್ತ ತರಳರೀರ್ವರನು ।
ಕರದಲ್ಲಿ ಮುಸಲವ ತಿರುಹುತ್ತ ಕೋಪದಿ
ಕುರುರಾಯಗಿಂತೆಂದ ಭರದಿ ॥ ೩ ॥

## ಬಲರಾಮು-ಕೌರವರಲ್ಲಿ ಸಂಧಾನ

ರಾಗ—ಶಂಕರಾಭರಣ; ತಾಳ-ಅಷ್ಟ

(ಧಾಟಿ—ಕರ್ಣಜಾತ ಕೇಳೊ ಮಾತ । ಸಣ್ಣವನೆಂಬುದಕಾಗಿ)
ಏನಿದೇನು ಕೌರವೇಂದ್ರ । ನೀನು ನಮಗೆ ಪ್ರೀತನಾಗಿ
ದಾನವನ ಸಹಾಯಕಾದೆ । ಹೀನಮತಿಯಲಿ ॥
ನೀನು ಪ್ರೀತನಹುದು ಹರಿಯ । ಸೂನುಗಳೆನ್ನಾಪ್ತನನ್ನು
ಮಾನಗಳೆದರದನು ಕಂಡು । ನಾನು ತಡೆವೆನೆ ॥ ೧ ॥

ಒಳವನರಿತುಕೊಳದೆ ನಿನ್ನ । ಗೆಳೆಯನೇತಕೆಮ್ಮಮೇಲೆ
ಕಲಹಕಿಂದು ಬಂದನಿದನು । ತಿಳುಹು ಕೌರವ ॥
ಬಳಲಿ ಪೋಪ ರುಕ್ಮಿಯನ್ನು । ಬಿಲದೊಳಿಟ್ಟ ನ್ಯಾಯವಾದ
ಕೆಲಸದಿಂದ ಕರ್ಣ ನಿಮ್ಮ । ಕಲಹಕೈದಿದೆ ॥ ೨ ॥

ಬಲ್ಲೆ ನಿಮ್ಮ ನ್ಯಾಯವೆಲ್ಲ । ಒಳ್ಳೆ ಮಾತಿನಿಂದ ಪೋಪು-
ದಲ್ಲದಿರ್ದರೆನ್ನಧುರಕೆ । ನಿಲ್ಲು ನೋಳ್ಪೆನು॥
ನಿಲ್ಲದೈದುವುದಕೆ ಕರಗ । ಳಲ್ಲಿ ಬಳೆಯತೊಟ್ಟುದುಂಟೆ
ಗೊಲ್ಲರಾದ ನಿಮ್ಮ ಹೆಮ್ಮೆ । ಯೆಲ್ಲ ನಿಲಿಸುವೆ ॥ ೩ ॥

ಕೆರಳಿ ರಾಮನೆಲವೊ ನಿನ್ನ । ಹಿರಿಯುತನವ ತೋರೆನುತ್ತ
ಭರದಿ ಮುಸಲದಿಂದ ಹೊಯ್ದ । ಕುರುಮಹೀಂದ್ರನ ॥

ಅರಸ ಕೌರವೇಂದ್ರ ಗದೆಯೊ। ಳೆರಗಿದನಾ ರಾಮನನ್ನು
ಕರದೊಳಿಂತು ಹಿಡಿದರವರು। ಧುರವನಳುಕದೆ ॥ ೪ ॥

ರಾಗ — ಕೇದಾರ ಗೌಳ; ಝಂಪೆ ತಾಳ

ಇಂತವರು ಹೋರಾಡುತ । ಇರ್ದು ಬಳಿ-
ಕಂತರಂಗದೊಳಳುಕುತ ॥
ಚಿಂತಿಸುತ ನೃಪನೊಂದನು । ರೇವತೀ-
ಕಾಂತನೊಡನಿಂತೆಂದನು ॥ ೧ ॥

ಭಾವ ಕೇಳಿಂತು ನಾವು । ಹಳಚುವದಿ-
ದಾವ ರೀತಿಯ ಚಂದವು ॥
ಈ ವಿಷಯದೊಳಗೊಂದನು । ಪೇಳುವೆನು
ಭಾವಿಸೈ ಮನದೊಳದನು ॥ ೨ ॥

ಇಂದು ನಮ್ಮರ್ಕಜನನು । ನಿರ್ಬಂಧ-
ದಿಂದ ಬಿಡಿಸಿದರೆಮ್ಮನು ॥
ಹೊಂದಿರುವ ಮಿತ್ರಭಾವ । ಉಳಿವುದೆನ-
ಲೆಂದನಾ ರಾಮದೇವ ॥ ೩ ॥

ದನುಜರನು ಕೊಂದು ಕಡೆಗೆ । ಕುಮತಿ ಕ-
ರ್ಣನ ಬಿಡಿಸಿ ಕೊಡುವೆ ನಿನಗೆ ॥
ಮನಕಿದೊಪ್ಪಿತವೆ ತಿಳಿದು । ಪೇಳಬೇ-
ಕೆನಲವನುಸಿರ್ದನೊಲಿದು ॥ ೪ ॥

ಭಾಮಿನಿ

ಆಗಲೇನದಕಿಲ್ಲ ಚಿಂತನೆ
ಈಗಲೀ ರಣಚಿತ್ತವೃತಿಗೆ
ತಾಗದೈದಲಿ ಪ್ರೀತಿಯಿರಲೆನಲದಕೆ ಬಲಭದ್ರ ।
ಆಗಲನುಮತಿಯಿತ್ತು ಹರುಷಿತ-
ನಾಗಿ ಕೃಷ್ಣಾತ್ಮಜರು ಸಹಿತಾ
ಮಾಗಧಾದ್ಯರ ಮೇಲೆ ಹಾಯ್ದನು ಹವಮಹೋತ್ಸವಕೆ ॥

ರಾಗ—ತೋಡಿ ; ತಾಳ-ಅಷ್ಟ

ಬಳಿಕಲಾ ಬಲ-ಕಾಮ-ಕಲಿಭಾನುಮುಖ ಯದು
ಕುಲದ ಭಟೋತ್ತಮರು ।
ಮಲೆತ ಭೂಪರನೆಲ್ಲ ಗೆಲಿದು ಬಿಗಿದು ಗುಹೆ-
ಯೊಳಗೊಯ್ದು ಕೆಡಹಿದರು ॥ ೧ ॥

ಒಂದೆಡೆಯಲಿ ಪಾಂಡು ನಂದನ ನರಸುರರ
ಕೊಂದು ಕೆಡಹುತಿರ್ದರು ।
ಒಂದೆಡೆಯಲಿ ಶಕ್ತಿಯಂದದ ಹರಿ ದೈತ್ಯ-
ವೃಂದವ ಕೊಲುತಿದ್ದನು ॥ ೨ ॥

ಧರಣೀಂದ್ರ ಲಾಲಿಸೀ ತೆರದಿ ಮೂರ್ಕೋಟಿಯಾ
ಸುರರ ಶಿರಸ್ಸುಗಳು ।
ಉರುಳಿದವಿಳೆಯಲ್ಲಿ ಮೆರೆದವು ರಣಭೂತ-
ಸರಣಿ ಸಂತುಷ್ಟಿಯೊಳು ॥ ೩ ॥

ಅತ್ತ ನಿಕುಂಭನಾ ಶಕ್ತಿಯ ಮರೆಯಲ್ಲಿ
ನಿತ್ತು ಮಹಾಯುಧವ ।
ಎತ್ತಿಹೊಯ್ದರೆ ಮುರಿಯುತ್ತಿರೆ ಕಂಡು ಬೇ-
ಸತ್ತು ನೊಂದನು ದಾನವ ॥ ೪ ॥

ವಾರ್ಧಕ

ಏನಿದಚ್ಚರಿಯೆಂದು ಯೋಚಿಸುತ ಮೊದಲಬ್ಜ-
ಸೂನು ಹರಿಶಕ್ತಿಯಿಂ ಮೃತ್ಯುವೆನಗೆಂದುಸಿ-
ರ್ದಾ ನುಡಿಯನೆಣಿಸಿ ಕೊಂಡಿದೆ ಶಕ್ತಿಯಿದರಿಂದಲೆನ್ನೀ ಕಳೇಬರಕ್ಕೆ ।
ಹಾನಿಯಹುದನ್ಯರೂಪದೊಳಿದಂ ಗೆಲ್ದಪೆಂ
ತಾನೆಂದು ಖಳ ನೊಂದು ಯೋಜನೋನ್ನತಿ ಕ್ರೋಶ-
ಮಾನವಿಸ್ತೀರ್ಣದತ್ಯುಗ್ರ ಕೇಸರಿಯನುರು ಮಾಯೆಯಿಂ ನಿರ್ಮಿಸಿದನು

## ಐವೊಗದ ಸಿಂಹದ ಅವತಾರ

ಭಾಮಿನಿ

ಅರಸ ಕೇಳ್ಳೈ ಪಂಚವದನದ
ಉರಿವ ಕೆನ್ನಾಲಿಗೆಯು ಕೆಂಗಿಡಿ-
ಗರೆವ ಕಂಗಳ ದೀರ್ಘದಂಷ್ಟ್ರ ಕರಾಳ ನಖಮುಖದ ।
ನರಹರಿಗೆ ನೂರ್ಮಡಿಯ ಘನ ಭೀ-
ಕರ ಮಹಾಕಾರದಲಿ ಬಾಯ್ಗಳ
ತೆರೆದು ಗರ್ಜಿಸುತಾಗಳಿಂತೆಂದುದು ನಿಕುಂಭನಿಗೆ ॥

ರಾಗ—ತೋಡಿ; ತಾಳ-ಏಕ

(ಧಾಟಿ—ಗುರುಗಳೇ ದುರಂತ ಕಾರ್ಯ । ದಿರವ ಪೇಳ್ವತೆರದಿ)

ಎನ್ನನೇಕೆ ಸೃಜಿಸಿದೆ ಸಂ । ಪನ್ನ ದನುಜ ನೀನು ।
ನಿನ್ನ ಕೊರತೆಯೇನು ಪೇಳ್ವು । ದೆನ್ನ ಪರಿಯ ನಾನು ॥
ಮುನ್ನ ನುಡಿವೆ ಹಸಿವಿನುರುಬೆ । ಯುನ್ನ ತಡೆಯೆನಿಂದು।
ತಿನ್ನಲಾವುದುಂಟು ತೋರಿ । ಸೆನ್ನುತುಸಿರಿತಂದು ॥ ೧ ॥

ದುಷ್ಟಯಾದವಾಳಿಯೆನ್ನ । ಪಟ್ಟಣಕ್ಕೆ ಬಂದು ।
ಕುಟ್ಟಿ ಕೊಂದರಮಿತವಾದ । ದಿಟ್ಟ ಭಟರನಿಂದು ॥
ದಿಟ್ಟಿಯೋರ್ವಳಿರ್ಪರವರೊ । ಳಿಷ್ಟು ಜನವ ನೀನು ।
ಹೊಟ್ಟೆಗಿಕ್ಕಿಕೊಂಡರೆನಗೆ । ತುಷ್ಟಿಯೆಂದನವನು ॥ ೨ ॥

ಚೆಂದವಾಯಿತವರನೆಲ್ಲ । ಕೊಂದು ತಿಂದು ನಿನಗೆ ।
ಇಂದು ತೋಷಪಡಿಸುವೆ ನೋ । ಡೊಂದೇಗಳಿಗೆಯೊಳಗೆ ॥
ಎಂದು ಭರದೊಳಾ ನಿಕುಂಭ । ನಿಂದ ನೇಮಗೊಳುತ
ಬಂದುದು ಯಾದವರ ಬಲದ । ಮುಂದಕೆ ಗರ್ಜಿಸುತ ॥ ೩ ॥

ರಾಗ—ಘಂಟಾರವ; ತಾಳ-ಅಷ್ಟ

ಬರುತ ಕೂಗುವ ಘೋಷದಿಂದದ್ರಿಗಳ್
ಜರಿವ ಧರೆ ಬಾಯ್ । ಬಿರಿವ ಮೂಜಗ
ಮರುಗುವಂತಾರ್ಭಟಿಸುತ ॥

ಉರುಬಿ ಹಾರುತ್ತ ಬೀಳುತ್ತ ಜಿಗಿಯುತ್ತು-
ಬ್ಬರದಿ ಯದುಬಲ । ಶರಧಿಯಿದಿರಿಗೆ
ತೆರೆದ ಬಾಯಲಿ ಬಂದುದು ॥ ೧ ॥

ಬಂದು ಕೇಸರಿ ಕೂಗಿತೇತಕೆ ನೀವು
ನಿಂದು ಕದನದೊಳಿಂದು ದನುಜರ
ಕೊಂದು ಕೆಡಹಿದಿರೀಗಲೇ ॥
ತಿಂದು ತೇಗುವೆ ನಿಮ್ಮನೆಲ್ಲರನೆನ್ನ
ಮುಂದೆ ಬನ್ನಿರಿ । ಮಂದಮತಿಗಳೆ
ಎಂದು ಘೋರಾಕಾರದಿ ॥ ೨ ॥

ಏನಿದ್ವದ್ಭುತವಕಟೆಂದುಯಾದವ-
ಸೇನೆ ಹೆದರುತ । ಮಾನಸದೊಳನು-
ಮಾನಗೊಂಡಿತು ಕ್ಷಣದಲಿ ॥
ಆನಿದಾನವ ಶಕ್ತಿಯೀಕ್ಷಿಸುತಲಿ-
ರ್ದಾ ನಿಕುಂಭಕ । ದಾನವನ ಮಾ-
ಯಾನುಕೃತಿಯೆಂದರಿದನು ॥ ೩ ॥

ಭಾಮಿನಿ

ಹಸ್ತಿನಾಪುರಪತಿಯೆ ಕೇಳಾ
ಶಕ್ತಿ ತನ್ನಯ ಸೇನೆಗಭಯದ
ಹಸ್ತವನು ತೋರಿಸುತ ನೂಕುತ ನಿಜಮಹಾರಥವ ।
ಎತ್ತಲಡಗಿದ ಖಳನಿಕುಂಭನೆ-
ನುತ್ತಮೋಘ ಶರಾಳಿಯನು ಕವಿ-
ಸುತ್ತ ಬರಲಿದಿರಾಗಿ ಕೇಸರಿ ನುಡಿದುದಾರ್ಭಟಿಸಿ ॥

ರಾಗ—ಕಲ್ಯಾಣಿ; ತಾಳ—ಅಷ್ಟ

(ಧಾಟಿ—ಏನನುಸಿರಿದೆಯೋ । ಎಲಾ ತಮ್ಮ)

ಯಾರೆ ತರುಣಿ ನೀನು । ಯುದ್ಧಕೆ ಬಂದೆ
ಯಾರೆ ತರುಣಿ ನೀನು ॥ ಪ ॥

ಧೀರ ಭಟರಂತೋರಣದಿ ರಥ-
ವೇರಿ ಚಾಪದಿ ಭೂರಿ ಶರಗಳ
ತೂರುತಲೆ ಕಲೆಯೇರುತಲೆಯು-
ಬ್ಬೇರುತಲೆ ಬಹೆಯಾರುಭಟಿಸುತ ||

ರಾಗ—ಭೈರವಿ; ತಾಳ_ಅಷ್ಟ

ದುರುಳ ನಿಕುಂಭನನು। ಕೊಲ್ಲಲು ಬಂದ
ತರುಣಿಯಾಗಿಹೆನು ನಾನು ||
ಅರಗಳಿಗೆಯಲಿದ | ನರಿಯಲು ಬಹುದೆಂದು
ಶರಗಳ ಸುರಿಸಿದನು ||

ರಾಗ-ಕಲ್ಯಾಣಿ; ತಾಳ-ಅಷ್ಟ

(ಧಾಟಿ—ಏನನುಸಿರಿದೆಯೋ | ಎಲಾ ತಮ್ಮ)

ಧೀರ ದನುಜ ನಿಕುಂಭನಿಗೆ ಜಗ
ಮೂರು ಬೆದರುವದವನ ಕೊಲ್ಲುವ
ನಾರಿಯೆಂದೆನುತೀ ರಣದಿ ಮದ-
ವೇರಿ ನುಡಿದೆ ವಿಚಾರವಿಲ್ಲದೆ ||
ಪೋಗು ಸಾಯದಿರು | ಭಾಮಿನಿಯೆ ನೀ
ಪೋಗು ಸಾಯದಿರು ||

ರಾಗ—ಭೈರವಿ ; ತಾಳ-ಅಷ್ಟ

ಅಂತಹ ಬಲವಂತನು | ಆಗಿರ್ದವ-
ನಿಂತಡಗಿರವುದಿನ್ನು ||
ಎಂತಹ ಗುಣವೆನ್ನು | ತಂತರಗೊಡದಸ್ತ್ರ-
ಮಂ ತೆಗೆದೆಸುತಿರ್ದನು ||

ರಾಗ—ಕಲ್ಯಾಣಿ ; ತಾಳ-ಅಷ್ಟ

(ಧಾಟಿ—ಏನನುಸಿರಿದೆಯೋ। ಎಲಾ ತಮ್ಮ)

ಪುಲ್ಲೆಗಂಗಳ ಚೆಲ್ವೆಯರ ಜತೆ-
ಯಲ್ಲಿ ಆಡುತ ಪಾಡುತಿರ್ಪವ-
ಳಿಲ್ಲಿ ಎನ್ನಿದಿರಲ್ಲಿ ಬಂದರೆ
ಕೊಲ್ಲದಿರುವೆನೆ ಅಕಟ ಸುಮ್ಮನೆ ॥
ಯಾಕೆ ರಣ ನಿನಗೆ । ಏ ಕಾಮಿನಿ
ಯಾಕೆ ರಣ ನಿನಗೆ ॥

## ಶಕ್ತಿ-ಸಿಂಹ ಸಂಗ್ರಾಮ

ರಾಗ—ಭೈರವಿ ; ತಾಳ-ಅಷ್ಟ

ಕೂಗಬೇಡೆಲೆ ಸುಮ್ಮನೆ । ಕೇಸರಿ ನಿನ್ನ
ನೀಗ ಭಂಗಿಪೆನು ತಾನೇ ॥
ಪೋಗಬೇಡೆನಗಿದಿರಾಗಿ ನಿಲ್ಲೆನುತಲ-
ಮೋಘ ಬಾಣಗಳೆಚ್ಚನು ॥

ರಾಗ—ಮಾರವಿ; ತಾಳ—ಏಕ;

(ಧಾಟಿ—ಏನೆಂಬೆನು ನೃಪ । ಸೂನುಗಳುರುತರ)

ವಸುಧೇಶ್ವರ ಕೇಳಸುರಾರಿಯ ಶರ-
ವಿಸರಂಗಳಲೆಕ್ಕಿಸದಾ ಕೇಸರಿ-
ಯುಸಮಾಕೃತಿಯನು ಪಸರಿಸುತಲಿ ದೆಸೆ
ದೆಸೆ ಮೊಳಗಲು ಘೋಷಿಸುತವನೆಡೆಗೆ । ಬಂದುದಾಗ ॥ ೧ ॥

ಹರಿಯುದಕಂಜಿದ ತೆರದಲಿ ಕಾಣಿಸು-
ತಿರದೊಂದೆಡೆಗತಿ ಭರದಲಿ ಜಿಗಿಯುತ
ಕೆರಳಿದು ಮುಗುಳುರು ಶರಗಳೆಸುತ ಮುಂ
ಬರಿಯುತ ಕಾದಿದ ಸರಿ ಸರಿ ಯೆನಿಸಿ । ಕೇಳು ಭೂಪ ॥ ೨ ॥

ಯಾದವಪಾಂಡವ ಯೋಧರು ಬಳಿಕ ಮ-
ಹಾ ಧೈರ್ಯದಿ ಬಹು ಕೈದುಗಳನು ಪಿಡಿ-
ದೈದಿಯೆ ಸಿಂಗವ ಹೊಯ್ದರೆ ತಾಗದೆ
ಹೋದವು ಹತಿಗಳು ಚೋದಿಗವಿದನು । ಪೇಳಲೇನು ॥ ೩ ॥

ತುಂಗಪಯೋಧರೆ ನುಂಗುವೆ ನಿನ್ನನು
ಸಂಗಡಿಗರು ಸಹಿತಂಗವನೀಕ್ಷಿಸು
ಹೊಂಗದಿರೇನುತಾ ಸಿಂಗವು ಬರಲಾ
ರಂಗನು ಯಾದವರಿಂಗತಿ ಭರದಿ । ಪೇಳ್ದನಾಗ ॥ ೪ ॥

ವಾರ್ಧಕ

ಅರ್ಜುನಾದಿಗಳುರುಬಬೇಡಿರಿದು ಸದ್ಧರ್ಮ-
ವರ್ಜಿತ ನಿಕುಂಭಕನ ಮಾಯೆ ನಮ್ಮೆಲ್ಲರಂ
ಗರ್ಜಿಸುತ ನುಂಗಿದೊಡೆಯುಂ ಪಿಂತೆ ಕುಂಭ-ಕರ್ಣಂ ಕಪಿಗಳಂ ವೃತ್ರನು ।
ಪರ್ಜನ್ಯವಾಹನಂ ನುಂಗಿದಂತಹುದಿಲ್ಲಿ
ನಿರ್ಜೀವನಂ ಗೈವೆನೀ ಕಪಟರೂಪಮಂ
ನಿರ್ಜರರ್ ಮೆಚ್ಚುವಂತೆನುತ ಮಾಯಾಹರಣ-ಮಂತ್ರಾಸ್ತ್ರಮಂ ತೆಗೆದನು॥

## ಪಂಚಾನನ – ಪರಾಭವ

ರಾಗ–ಶಂಕರಾಭರಣ ; ತಾಳ–ಮಟ್ಟೆ

ಅರಸ ಲಾಲಿಸನಿತರೊಳಗೆ ಸಿಂಗ ಹರಿಯನು ।
ಎರಡು ಕೈಯೊಳೊತ್ತಿಪಿಡಿಯಲಸುರಮಥನನು ॥
ಉರುಬಿ ಬಿಡಿಸಿಕೊಂಡು ಬೆದರಿದಂತೆ ನಟಿಸುತ ।
ಭರದೊಳೋಡಿಹೋದನತ್ತಲಿತ್ತ ನೋಡುತ ॥ ೧ ॥

ನಾರಿಯೆತ್ತಪೋಪೆ ನಿಲ್ಲುನಿಲ್ಲೆನುತ್ತಲೇ ।
ಘೋರಸಿಂಹವವನ ಬೆನ್ನಿಗೋಡಿತಾಗಲೇ ॥
ಶೌರಿ ಕರದೊಳಿರ್ದ ಮಂತ್ರ ಶರವ ತಿರುವಿಗೆ
ಏರಿಸುತ್ತಲಿಂತು ನುಡಿದ ಪಂಚವಕ್ತ್ರಗೆ ॥ ೨ ॥

ಎಲೆ ದುರಾತ್ಮ ಕೇಳಿದೊಂದು ಶರದ ಪರಿಯನು
ತಿಳಿದುಕೊಳ್ಳೆನುತ್ತ ಹೂಡಿದಸ್ತ್ರವೆಚ್ಚನು ॥
ಶರವು ತಾಗಿದೊಡನೆ ಸಿಂಗವೊರಗಿ ಧರೆಯಲಿ ।
ಉರುಳಿಯಡಗಿ ಪೋದುದಾಗಳೆಲ್ಲರಿದಿರಲಿ ॥ ೩ ॥

## ನಿಕುಂಭನ ಮಾಯಾಮೃಗಯುದ್ಧ

ವಾರ್ಧಕ

ಬಳಿಕ ಕರಿ-ಕಿರಿ-ಖಡ್ಗ-ಮಹಿಷ-ಭಲ್ಲೂಕ-ಹೆ
ಬ್ಬುಲಿ-ಸಿಂಗ-ಸರ್ಪ-ಮೊದಲಾದ ಭೀಕರ ಜಂತು-
ಗಳ ಕೋಟಿ ಸಂಖ್ಯೆಯಿಂ ಸಿಡಿಲು-ಶಿಲೆ-ಶೈಲಾದಿಗಳನಮಿತ ಸಂಖ್ಯೆಯಿಂದ ।
ಖಳನೊದಗಿ ಮಾಯೆಯಿಂ ಸೃಜಿಸಿಬಿಡುತವುಗಳಿಂ
ಮಲೆತು ಯದು ಸೇನೆಯಂ ಪೀಡಿಸಲ್ ಮುರಹರಂ
ತಿಳಿದು ನಿಜನಾರಾಯಣಾಸ್ತ್ರದಿಂದೆಲ್ಲಮಂನಿರ್ನಾಮಗೈದನಂದು ॥ ೪ ॥

ಭಾಮಿನಿ

ಅರಿದನಿದನೆಲ್ಲವ ನಿಕುಂಭಾ-
ಸುರನು ನಿಷ್ಫಲವಾಯ್ತು ಬೊಮ್ಮನ
ವರದ ಮಾಯಾಶಕ್ತಿ ತನಗಿದು ಕಡೆಯ ದಿನವಿನ್ನು ।
ಮರೆಯೊಳಿರ್ದೇಗೈವೆ ವೈರಿಯ
ಸರಿಸದಲಿ ಹಳಚುವುದೆ ಘನವೆನು-
ತಿರದೆ ಶಸ್ತ್ರಾಸ್ತ್ರಗಳನಾಂತಾ ಶಕ್ತಿಗಿದಿರಾದ ॥

## ಶಕ್ತಿನಿಕುಂಭರ ಮುಖಾಮುಖಿ ದ್ವಂದ್ವ

ಕಂದಪದ್ಯ

ಬಂದಾ ನಿಶಾಚರೇಶ್ವರ-
ನಂದವನೀಕ್ಷಿಸುತ ಶಕ್ತಿಯತಿಹರ್ಷದಲಿ ।
ನಿಂದುರು ಧನ್ವದೊಳಸ್ತ್ರವ
ನೊಂದಿಸುತವನಂ ಪಚಾರಿಸುತಲಿಂತೆಂದಂ ॥

ರಾಗ—ತೋಡಿ; ತಾಳ—ಅಷ್ಟ

[ಧಾಟಿ—ಜಾಣನಹುದಹುದೋ । ರಾಘವ ಬಲು]

ಧೀರನಯ್ಯ ನೀನು । ದಾನವ ರಣ । ಧೀರನಯ್ಯ ನೀನು || ಪ ||
ಭಾರಿಯ ಭಟನೆಂದು । ತೋರಿತೀ ದಿನದಲ್ಲಿ || ಅ ಪ. ||

ಮೂರು ರೂಪವ ಮಾಡಿಕೊಂಡು । ಲೋಕ
ಮೂರ ಗೆಲ್ಲುವ ಭ್ರಮೆಗೊಂಡು ||
ಸಾರಿ ಗಂಧರ್ವ । ಶರೀರದಿ ಭಾನು ಕು-
ಮಾರಿಯ ಪಿಡಿದುತಂದು । ಆದೇಹವ
ತೀರಿಸಿಕೊಂಡೆಯಿಂದು । ತಪಸ್ವಿಯಾ-
ಕಾರವ ಕಳೆದೆಯಿಂದು । ಮೆಚ್ಚಿದೆ ರಣ । ಧೀರ || ೧ ||

ರಾಗ—ಭೈರವಿ; ತಾಳ—ಏಕ

ಎಂದ ನುಡಿಯನುರೆ ಕೇಳಿ । ಖಳ । ನೆಂದನು ಕೋಪವತಾಳಿ ।
ಹಿಂದಿನ ಕಥೆಯಿರಲಿಂದು । ಮಾಽ । ಳ್ಪಂದವದೇನುಸಿರೆಂದು || ೧ ||

ತುದಿಯ ನುಡಿಯ ಕೇಳೀಗ । ಆಽ । ಪದುಮಾಽಕ್ಷಿಯರನು ಬೇಗ ।
ಮೊದಲೆನಗೊಪ್ಪಿಸು ನಿನ್ನ । ಜೀಽ । ವದೊಳಿರಿಸುವೆ ನೋಡೆನ್ನ || ೨ ||

ಕೊಡೆ ಕೊಡೆ ಕೊಡೆ ವಧುಗಳನು । ನಾ । ಽ । ಬಿಡೆ ಬಿಡೆ ಬಿಡೆ ಛಲಗಳನು ।
ಬಿಡು ಬಿಡು ಬಿಡು ಹೆಮ್ಮೆಯನು । ನೀಽ । ತೊಡು ತೊಡು ತೊಡು
ಶರಗಳನು || ೩ ||

ಸಾರಿ ಕೊಲುವುದೆಂಬುದನು । ಅರಿ । ದೀ ರೀಽತಿಯನುಸಿರಿದೆನು ।
ಚೋರನೆ ನಿನಗಿದು ಮನಕೆ । ಸರಿ । ದೋರದಿರಲು ನಿಲು ರಣಕೆ || ೪ ||

ಮಾತಿನೊಳಗೆ ಫಲವೇನು । ಎನು । ತಾತನು ಪೊಸಕಣೆಗಳನು ।
ಖಾತಿಯೊಳೆಸಲ್ಕೆಽಲ್ಲವನು । ಕಡಿ । ದೀತನುಗಿದ ಶರಗಳನು || ೫ ||

ಹಲವಂಗದ ಶರಗಳಲಿ । ಮೇಣ್ । ಹಲವು ಮಹಾಯುಧಗಳಲಿ ।
ಹಳಚಿದರವರಚ್ಯುತನು । ಕಡೆ । ಯಲಿ ತೆಗೆದನು ಚಕ್ರವನು || ೬ ||

## ನಿಕುಂಭ – ಸಂಹಾರ

ವಾರ್ಧಕ

ಧಾತ್ರೀಶ ಕೇಳ್ ಚಕ್ರಮಂ ಕರಾಗ್ರದೊಳಾಂತ
ಮಾತ್ರದಿಂದಿನಕೋಟಿತೇಜದಿಂದುಜ್ವಲಿಸೆ
ಗೋತ್ರಾರಿ ಮೊದಲಾದ ನಿರ್ಜರರ್ ಬೆದರಿದರ್ ಬಳಿಕಾ ನಿಕುಂಭನೊಡನೆ।
ರಾತ್ರಿಚರ ಕೇಳಿದರೊಳುಳಿದುದಾವರೆ ನಿನ್ನ
ಗಾತ್ರಮಿನ್ನಳಿವಿಲ್ಲ ನಿನಗೆನುತ ನಾಳೀಕ-
ನೇತ್ರನೆಸಲಾ ಸುದರ್ಶನವೈದಿ ಕತ್ತರಿಸಿತಾ ನಿಕುಂಭಕನ ತಲೆಯ ||

ಭಾಮಿನಿ

ಹಾರಿಬಿದ್ದವು ರುಂಡ-ಮುಂಡಗ-
ಳೋರಣದೊಳಾಶಕ್ತಿಮೂರ್ತಿಯ
ಚಾರುಮಕುಟದ ಮೇಲೆ ಸುರಿದರು ಸುರರು ಪೂಮಳೆಯ ।
ಭೇರಿ-ಭೀಷಣ-ಘೋಷಣಾದಿ ಗ-
ಭೀರ ಜಯವಾದ್ಯಗಳು ಯದುಪರಿ-
ವಾರದಲಿ ಮೊಳಗಿದವು ದನುಜ ನಿಕುಂಭನಳಿವಿನಲಿ ||

## ಯಾದವರ ವಿಜಯೋಲ್ಲಾಸ

ವಾರ್ಧಕ

ಆತನಸುರಾಧಿಪಾನುಜ ಸುತನ ಸಮರದೊಳ್
ಸೋತಾತನಿಂದಳಿದು ರಾಹುಕೇತುವನು ಕೊಂ
ದಾತನಭಿಜನಗುರುವಿನಯ್ಯನಿಂ ಬದುಕಿದನ ಸ್ವಾಮಿಯಯ್ಯನ ಮಿತ್ರನ ।
ತಾತನ ನಿಯಂತೃತ್ವದಿಂ ಚರಿಪನಣುಗನ ನಿ-
ಕೇತನವನೈದಿ ತಾ ಮೇಲೆ ಯಾದವ-ಪಾಂಡು-
ಜಾತರೆಲ್ಲರ್ ಕೂಡಿ ಶಕ್ತಿಯಂ ನುತಿಸಿದರ್ ಜಯಜಯಧ್ವಾನದಿಂದ ||೧||
ಜಯ ಜಯ ಜಗನ್ಮಾತೆ ಜಯವಿಷ್ಣುಸುಪ್ರೀತೆ
ಜಯ ಜಯ ಮಹಾದೇವಿ ಜಯ ಶರಣ ಸಂಜೀವಿ
ಜಯ ಜಯಾಂಬುಜ ನೇತ್ರೆ ಜಯ ವಿಶ್ವನುತಿ ಪಾತ್ರೆ ಜಯ ದುಗ್ಧ
ವಾರ್ಧಿಜಾತೆ ।

ಜಯ ಜಯ ಜಗದ್ಭರಿತೆ ಜಯ ಶುಭಾವಹಚರಿತೆ
ಜಯ ಜಯ ಸದಾನಂದೆ ಜಯ ಸಕಲಗುಣವೃಂದೆ
ಜಯ ಜಯ ಪರಾಶಕ್ತಿ ಜಯ ಸರ್ವಹಿತಯುಕ್ತಿ ಎಂದು ಚರಣಕೆ
ಮಣಿದರು ॥೨॥

ಸುರಲೋಕಪಾಲಾಹ್ವಯಾಳಿಯಚ್ಯುತನಕ್ಷಿ-
ಯರಿಯರಮಣಿಯರಾಖ್ಯೆಯೊಳಿ ವ್ರತನಾಮಗಳ
ಸರಣಿದೇಶಾಂಕಿತಾವಳಿಯೀ ಚತುಷ್ಕದಿಂ ತ್ರ್ಯಕ್ಷರಾಹ್ವಯನಾಲ್ಕನು।
ಅರಸಿ ನಾಲುಕು ಪಂಕ್ತಿಯಂ ಬರೆದು ಮಧ್ಯದ-
ಕ್ಷರಗಳನ್ನೋದಲಾಗುವ ಪೆಸರೊಳಿಹ ಪುರಿಗೆ
ಸರಿದರಾ ಷಟ್ಪುರದೊಳುಳಿವಪ್ಪ ರಾಕ್ಷಸರ್ ಸ್ವಕುಟುಂಬ ಯುಕ್ತರಾಗಿ॥

ಭಾಮಿನಿ

ಆರಸಕೇಳಾ ಖಳರು ಸಹಿತಾ
ಪುರದೊಳಿಹ ಮೂರ್ಕೋಟಿ ದನುಜರ-
ನೊರಸಿದನು ಕಾಲಾಂತರದೊಳಮರಾಧಿಪತಿಗಾಗಿ।
ನರನು ನರನಾರಾಯಣರಿಗಾ-
ರರಿಗಳೋ ಯಮಸದನವವರಿಗೆ
ದೊರೆಯದಿಹುದೇ ಮೂರು ಲೋಕದ ಸಕಲ ಜನಗಳಲಿ॥

## ಭಾನುಮತಿ ಮತ್ತು ಅವಳ ಗೆಳತಿಯರ ಹಾಗೂ ಅರಿನೃಪರ ಬಿಡುಗಡೆ

ರಾಗ—ನೀಲಾಂಬರಿ; ತಾಳ—ರೂಪಕ

ಧರಣಿಪ ಕೇಳಿತ್ತಲು ನಿಜ
ಚರಣದೊಳೆರಗಿಹ ಯಾದವ-
ಸರಣಿಯು ಪಾಂಡುಕುಮಾರರ। ಶಿರಗಳ ಪಿಡಿದೆತ್ತಿ॥
ಪರಿಪರಿಯಲಿ ಸಂತೈಸುತ
ಹರಿ ನುಡಿದ ನಿಕುಂಭನ ಸಂ
ಹರಣದ ಕಾರಿಯ ಮುಗಿದುದು। ಸರಿಯಲ್ಲವೆ ಎನುತ ॥೧॥

ಮುಂದಿನ್ನೀ ಶಕ್ತ್ಯಾಕೃತಿ-
ಯುಂದವು ತನಗಲ್ಲೆನ್ನುತ
ಹಿಂದಿನ ಕೃಷ್ಣಾಂಗವನೇ । ಹೊಂದಿ ನಿಜಾಶ್ರಿತರ ||
ವೃಂದವು ಸಹಿತರಸಿ ದನುಜ-
ಬಂಧನದೊಳಗಿಹ ವಧುಗಳ
ನಂದದೊಳೊಡಗೊಂಡೆದ್ದನು । ಮಂದರಗಿರಿಧರನು || ೨ ||

ತನುಜರು ಬಂಧಿಸಿ ಗುಹೆಯಲಿ
ಜನಪರನಿಟ್ಟುದನರಿತಾ
ವನಜೇಕ್ಷಣನವರೆಲ್ಲರ । ನನುಕಂಪದಿ ಬಿಡಿಸಿ ॥
ಮನೆಗೈದಿರಿ ಸೌಖ್ಯದೊಳೆಂ
ದೆನಲರಸರು ಲಜ್ಜಿಸಿ ತಲೆ-
ಯನು ಬಗ್ಗಿಸಿ ನಿಜನಗರಿಗೆ । ತಮತಮಗೈದಿದರು || ೩ ||

## ಯಜ್ಞ ಸಮಾಪ್ತಿ

ರಾಗ—ರೇಗುಪ್ತಿ; ತಾಳ—ಅಷ್ಟ

(ಧಾಟಿ—ಧರಣೇಂದ್ರ ಲಾಲಿಸಯ್ಯ । ಮುಂಗಥೆಯನ್ನು)

ಭೂಪಾಲ ಲಾಲಿಸಯ್ಯ । ಮುಂಗಥೆಯನ್ನು
ಭೂಪಾಲ ಲಾಲಿಸಯ್ಯ || ಪ ||

ಅಸುರಾರಿ ಬಳಿಕ ಸಂ । ತಸದಿಂದ ಯಾದವ-
ವಿಸರದೊಡನೆ ಪಾಂಡುಜರುವೆರಸಿ ||
ಶಶಿಮುಖಿಯರನು ಕೂ । ಡಿಸಿಕೊಂಡು ಪಟ್ಟಣ
ವಸತಿಗೆ ಕಾವಲಿರಿಸಿ ವಾದ್ಯಘೋಷದಿಂ ॥
ಕುಶಲದಿಂದಧ್ವರದ । ಶಾಲೆಗೆ ಬಂದು
ವಸುದೇವಗೆರಗಿಯಾ । ಕಾರ್ಯವನೆಲ್ಲ
ಉಸಿರಿ ಸರ್ವರ ಮನದ । ಚಿಂತೆಗಳೆಲ್ಲ
ನಶಿಸುವ ರೀತಿಯನೆಸಗಿದನೊಲವಿಂದ || ೧ ||

ಸೂರಿವಿಪ್ರರ ಮುನಿ । ವೀರರ ಮಂತ್ರವಿ-
ಸ್ತಾರದಿಂದಧ್ವರ ನಡೆದುದಲ್ಲಿ ॥
ಧಾರುಣಿ-ಗೋ-ಕನ್ಯಾ-ವಾರಣ-ಹಯ-ರಥ-
ಚೀರ-ಕನಕಪಾತ್ರ-ಹೀರಗಳ್ ಮೊದಲಾದ ॥
ಭಾರಿಯ ದಾನಂಗಳು । ದಕ್ಷಿಣೆಯಾಗಿ
ಭೂರಿ ಸುವಿತ್ತಂಗಳು । ಸಂದವು ಜನ-
ತಾರತಮ್ಯಂಗಳೊಳು । ಸಮಸ್ತರು
ಸಾರಭೋಜನಗಳ । ಲೋರಂತೆ ದಣಿದರು ॥ ೨ ॥
ಅರಿಯಲಿನ್ನೇನೊಂದು । ಕೊರತೆಯಿಲ್ಲದೆ ಯಜ್ಞ
ಸರಿಯಾಗಿ ಮುಗಿಯಲಾ ಷಟ್ಪುರದ ॥
ವರಬ್ರಹ್ಮದತ್ತ ಭೂಸುರವೃದ್ಧನಿಗೆ ಧಾರೆ-
ಯೆರೆದಿತ್ತು ವಂದಿಸಿ ಹರಕೆಯನಾಂತು ಬಂ-॥
ದಿರುವ ಸಮಸ್ತರನು । ರೀತಿಯೊಳುಪ-
ಚರಿಸಿ ಬೀಳ್ಕೊಟ್ಟು ತಾನು । ತನ್ನವರನ್ನು
ಕರಕೊಂಡು ಮುರಹರನು । ಕೌಂತೇಯರು-
ವೆರಸಿ ದ್ವಾರಾವತೀ । ಪುರವನ್ನು ಸೇರ್ದರು ॥ ೩ ॥

## ಭಾನುಮತಿಯ ಬಯಕೆ

ಭಾಮಿನಿ

ದ್ವಾರಾವತಿಗೈತಂದು ಭಾನು ಕು-
ಮಾರಿಯುದ್ವಾಹದಲಿ ಯೋಚಿಸು-
ತೋರಣದಲಿ ಮಹಾಸ್ವಯಂವರವೆಸಗಬೇಕೆನುತ ।
ಶೌರಿ ಮುಂತಾದವರು ಸವನಿಪ
ಕಾರಿಯುವನಾ ಸಖಿಯರಿಂದ ವಿ-
ಚಾರದಲಿ ತಿಳಿದೈದಿ ನುಡಿದಳು ಭಾನುಮತಿ ಹರಿಗೆ ॥

ರಾಗ — ಸಾವೇರಿ ; ತಾಳ-ಏಕ

ಹರಿಯೆ ಲಾಲಿಸು ಸ್ವಯಂ । ವರ ಮುಖದೊಳಗೆನ್ನ
ಪರಿಣಯಗೈವಿರೆಂದರಿದೆನಿಂದಿನಲಿ ।

ಪರಿಯನೆಣಿಸೆ ಫಲ। ದೊರೆವುದಲ್ಲದರಿಂದ-
ಲರುಹುವೆ ಮನ್ಮನದಿರವನೆಲ್ಲವನು ॥ ೧ ॥

ಕ್ರೂರಕರ್ಮರು ಪಾಪಾ। ಚಾರಿಗಳೆಲ್ಲರು
ಧಾರುಣೀಶ್ವರರಿನ್ನು ವೀರಪಾಂಡವರು ॥
ಆ ರೀತಿಯಲ್ಲ ಸು। ಚಾರಿತ್ರರವರನ್ನು
ಸೇರುವದಲ್ಲದೆ ಬೇರೆಯಿಲ್ಲನುವು ॥ ೨ ॥

ಅರಸ ಧರ್ಮಜ-ಭೀಮ-ನರ-ನಕುಲರೊಳೈದೆ
ಗುರುಭಾವ ಜನಿಸುವುದರಿಯಲೈವರಲಿ ॥
ಕಿರಿಯನು ಸಹದೇವ। ವರನಾದರಹುದೆಂದು
ಸರಿಯಾಗಿ ಮನವೆನ್ನೊಳಿರುವುದು ದಿಟವು ॥ ೩ ॥

ಅದರಿಂದಾತನಿಗೆನ್ನ। ಮದುವೆಯಗೈಸುವ-
ದಿದೆಯೆನ್ನ ಚಿತ್ತವು ತುದಿಯೊಳೆಂದೆನಲು ॥
ಪದುಮದಳಾಕ್ಷ ತಾ। ನಧಿಕ ಸಂತೋಷದೊ-
ಳದಕೊಪ್ಪಿ ಕಳುಹಿದ ವಿಧುಬಿಂಬಮುಖಿಯ ॥ ೪ ॥

## ವಿವಾಹ ಸನ್ನಾಹ

ಭಾಮಿನಿ

ಅದರ ಮೇಲಾ ಮಾಧವನ ನೇ-
ಮದಲಿ ಯಾದವರೊಲಿದು ಶೃಂಗರಿ-
ಸಿದರು ಪುರಿಯನು ತರಿಸಿದರು ಬೇಕಾದ ವಸ್ತುಗಳ।
ಮುದದೊಳಿಷ್ಟನೃಪಾಲರಿಗೆ ಕಳು-
ಹಿದರು ಲೇಖನಗಳನು ಹಲವಂ
ಗದಲಿ ಹವಣಿಸುತಿರ್ದರೀಪರಿಯಧಿಕಸಂತಸದಿ ॥

ರಾಗ—ಕಾಂಬೋಧಿ; ತಾಳ—ಝಂಪೆ

ಅತ್ತಲಾ ಪಾಂಡವನೃಪೋತ್ತಮರು ಮದುವೆಗೆ ಸ-
ಮಸ್ತ ಕಾರಿಯವನಣಿಗೈದು ॥

ಮಿತ್ರ-ಬಾಂಧವ-ಭೂಮಿಪೋತ್ತಮರ ಬರಿಸಿದರು
ಪತ್ರಿಕೆಯ ಮುಖದೊಳನುವರಿದು ‖ ೧ ‖

ತರುಣಿಯರು ಸಹದೇವಗಿರಿಸಿ ಬಹುಭೂಷಣವ
ತರದಿ ಮದುವಣಿಗನೆಂದೆನಿಸೆ ‖
ಧರಣಿಸುರರನು ಪುರಸ್ಕರಿಸಿ ಬಹುಸಂಭ್ರಮದಿ
ಪೊರಮಟ್ಟರಖಿಳಜನವೆರಸಿ ‖ ೨ ‖

ಛತ್ರ-ಚಾಮರ-ಗೀತ-ನೃತ್ಯ-ವಾದ್ಯಂಗಳ ಮ-
ಹತ್ವದಲಿ ದಿಬ್ಬಣಿಗರಾಗಿ ‖
ಪತ್ತನವನುಳಿದು ಪೋಗುತ್ತವರು ದ್ವಾರಕೆಯ
ಹತ್ತಿರಕೆ ನಡೆದರನುವಾಗಿ ‖ ೩ ‖

ಮುಂದೆ ವಾರ್ತೆಯ ಕಳುಹಲಂದು ಹರಿಬಲರು ಯದು-
ವೃಂದಗಳು ಮಹಿಳೆಯರು ದ್ವಿಜರು ‖
ಬಂದವರುವೆರಸಿ ಕ್ರಮದಿಂದ ಬಹುವಾದ್ಯರವ-
ದಿಂದಿದಿರ್ಗೊಂಡರೊಡನವರ ‖ ೪ ‖

ಕರೆತಂದು ಸಕಲರನು ವರ ಸಭಾಸ್ಥಳದೊಳುಪ-
ಚರಿಸಿದರು ಹಲವಂಗದಿಂದ ‖
ತರದಿ ಮದವಣಿಗನೈತರುತ ಮಣಿಮಯದ ಹಂ
ದರದೊಳಗೆ ಕುಳಿತನನುವಿಂದ ‖ ೫ ‖

## ಭಾನುಮತೀ ಕಲ್ಯಾಣ

ವಾರ್ಧಕ

ಅರಸ ಕೇಳ್ ಬಳಿಕ ಪರಮೋತ್ಸವದೊಳವನಿಸುರ-
ವರಮಂತ್ರಘೋಷದಿಂ ಬಹುವಾದ್ಯರವಗಳಿಂ
ತರುಣಿಯರ ಶೋಭನಸುರಾಗದಿಂ ಭಾನು ನಿಜ-ಭಾರ್ಯಾಸಮೇತನಾಗಿ ।
ಮೆರೆವಗ್ನಿಸಾಕ್ಷಿಯಿಂ ಸಹದೇವನಿಗೆ ತನ್ನ
ತರಳೆಯಂ ವಿಧ್ಯುಕ್ತರೀತಿಯಿಂ ಮಿಗೆ ಧಾರೆ-
ಯೆರೆದಿತ್ತನೆಲ್ಲರುಂ ಸಂತೋಷಸಾಗರದೊಳೋಲಾಡುವಂದದಮಾಗೆ ‖

ರಾಗ—ಶೋಭನ ; ತಾಳ-ತ್ರಿಪುಟ

ಬಳಿಕಾ ಮಣಿಮಂಟಪದಲಿ ಮನ-
ವೊಲಿದು ವಧೂವರರನು ಹಸೆಮಣೆ-
ಯೊಳಗೆ ಕುಳ್ಳಿರಿಸಿ । ಮುದದಿಂದ ॥
ಮುದದಿಂದಲಿ ನೋಡುತ ಪಾಡುತ
ಲಲನೆಯರಾರತಿಯ । ಬೆಳಗಿದರು ॥ ಶೋಭಾನೆ ॥ ೧ ॥
ಕಾಂತಾಮಣಿ ಕಲಶುಕವಾಣಿ ಮ-
ಹಾಂತ ಗುಣಾನ್ವಿತೆ ಗಜಗಮನೆ ನಿ-
ಶಂತರ ಸುಖಿಯಾಗು ಸತಿಯಾಗು ॥
ಸತಿಯಾಗೆಂದೊರೆಯುತ ಮೆರೆಯುತ
ಕಾಂತೆಯರಾರತಿಯ ॥ ಬೆಳಗಿದರು ॥ ಶೋಭಾನೆ ॥ ೨ ॥
ಅಂಗಜ ಶತಸುಂದರ ಸಕಲಜ-
ನಾಂಗದೊಳಗ್ರಣಿಯಾಗೆನುತ ಭು-
ಜಂಗವುವೇಣಿಯರು । ಸಹದೇವ ॥
ಸಹದೇವಗೆ ಭಾನುಮತಿಗೆ ಶುಭ್ರ-
ಮಂಗಲದಾರತಿಯ । ಬೆಳಗಿದರು ॥ ಶೋಭಾನೆ ॥ ೩ ॥

## ವಿವಾಹ ಸಮಾಪ್ತಿ

ವಾರ್ಧಕ

ಅರಸ ಕೇಳ್ ದಾನ ದಕ್ಷಿಣೆ-ಭೋಜನಾದಿಗಳ
ಸರಣಿಯಿಂ ಸಕಲ ವರ್ಣದ ಜನಾವಳಿ ದಣಿದು
ಹರುಷಗೊಂಡುದು ಬಳಿಕ ಭಾನು ಹರಿಯನುಮತಿಯೊಳಿಭ-ಹಯ-ವರೂಥಗಳನು ।
ವರಧೇನು-ದಾಸ-ದಾಸೀಜನರನೆಣಿಕೆಯಿಂ
ದೆರಡೆರಡು ಸಾವಿರವನೈದೆ ಬಳುವಳಿಯಾಗಿ
ತರಳೆಗೊಲಿದಿತ್ತು ವಿಧಿವಿಹಿತದಿಂ ಪತಿಯೊಡನೆ ಬೀಳ್ಕೊಟ್ಟನಾತ್ಮಜೆಯನು ॥ ೧ ॥

# ಕಾವ್ಯಾಲಯದ ಪ್ರಕಟನೆಗಳು

| | ರೂ ನಪೈ. |
|---|---|
| ಅನ್ತಃಪುರಗೀತೆ—ಡಿ. ವಿ. ಜಿ. | ೩.೫೦ |
| ಅರಿಸ್ಟಾಟಲಿನ ಕಾವ್ಯಮೀಮಾಂಸೆ—ಎನ್. ಬಾಲಸುಬ್ರಹ್ಮಣ್ಯ | ಅಚ್ಚಿನಲ್ಲಿ |
| ಅಲೆಯುವ ಮನ—ಎ. ಎನ್. ಮೂರ್ತಿರಾವ್ .... | ೬.೨೫ |
| ಅಹಲ್ಯೆ—ಪು. ತಿ. ನರಸಿಂಹಾಚಾರ್ .... .... | ೨.೨೫ |
| ಅಂಚೆಮನೆ—ರವೀಂದ್ರನಾಥಠಾಕೂರ್ .... .... | ೦.೭೫ |
| ಆರ್ಯಕೀರ್ತಿ—ಚ. ವಾಸುದೇವಯ್ಯ .... .... | ೨.೨೫ |
| ಆಷಾಢಭೂತಿ—ಎ. ಎನ್. ಮೂರ್ತಿರಾವ್ .... .... | ೧-೦೦ |
| ಇದ್ದರೂ ಇರಬಹುದು—ಎಸ್. ಜಿ ಶಾಸ್ತ್ರಿ .... .... | ೨.೨೫ |
| ಇರುವಂತಿಗೆ—ಕೆ. ಎಸ್. ನರಸಿಂಹಸ್ವಾಮಿ .... .... | ೧.೨೫ |
| ಇವರು ಬಾಪು—ಆರ್. ಕೆ. ಪ್ರಭು .... .... | ೧.೫೦ |
| ಈಚಲು ಮರದ ಕೆಳಗೆ—ಪು. ತಿ. ನರಸಿಂಹಾಚಾರ್ .... | ೧.೭೫ |
| ಈಶೋಪನಿಷತ್ತು—ಡಿ. ವಿ. ಜಿ .... .... | ೦ ೭೫ |
| ಉಪವನ—ಕೆ. ಎಸ್. ನರಸಿಂಹಸ್ವಾಮಿ .... .... | ೨.೨೫ |
| ಉಮರನ ಒಸಗೆ—ಡಿ. ವಿ. ಜಿ. .... .... | ೨.೦೦ |
| ಉಂಗುರ—ಕೆ. ಎಸ್. ನರಸಿಂಹಸ್ವಾಮಿ .... .... | ೧ ೬೫ |
| ಎವರೆಸ್ಟ್ ವೀರ—ತೆನ್‌ಸಿಂಗ್‌ಮತ್ತು ಉಲ್ಮನ್ .... | ೫.೦೦ |
| ಐರಾವತ—ಕೆ. ಎಸ್. ನರಸಿಂಹಸ್ವಾಮಿ .... .... | ೧.೬೫ |
| ಕನ್ನಡ ಋತುಸಂಹಾರ—ಎಸ್. ವಿ. ಪರಮೇಶ್ವರಭಟ್ಟ .... | ೦.೭೫ |
| ಕನ್ನಡ ಮೇಘಸಂದೇಶ—ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿ .... | ೦.೭೫ |
| ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ—೧—ಶ್ರೀ .... | ೩.೦೦ |
| ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ—೨—ಶ್ರೀ .... | ೧.೭೫ |
| ಕಾವ್ಯಸಮೀಕ್ಷೆ—ತೀ. ನಂ. ಶ್ರೀಕಂಠಯ್ಯ .... .... | ೨.೬೫ |
| ಕುಣಿಗಲ ರಾಮಾಶಾಸ್ತ್ರಿಗಳ ಚರಿತ್ರೆ—ಎಂ. ಎಸ್. ಪುಟ್ಟಣ್ಣ | ೨.೬೫ |
| ಕೋಲು ಕುದುರೆ—ಹೊಯಿಸಳ .... .... | ೦.೫೦ |
| ಗಾನಕಲೆ—ರಾ. ಅನಂತಕೃಷ್ಣಶರ್ಮ .... .... | ೧.೫೦ |
| ಗೋಖಲೆ : ನನ್ನ ರಾಜಕೀಯ ಗುರು—ಗಾಂಧೀಜಿ .... | ೧.೬೫ |
| ಗೋರಾ—ರವೀಂದ್ರನಾಥಠಾಕೂರ್ .... .... | ೨.೫೦ |

| | |
|---|---|
| ಗೌರಿಯ ಮದುವೆ—ಸಿ. ಕೃಷ್ಣ .... .... | ೧.೨೫ |
| ಗಂಗಾವತಾರ—ಜನಾರ್ದನ ಗುರ್ಕಾರ್ .... .... | ೧.೨೫ |
| ಚಟಾಕಿ—ಎಲ್. ಗುಂಡಪ್ಪ .... .... | ೦.೫೦ |
| ಚಾಲುಕ್ಯ ವಿಕ್ರಮ—ಶ್ರೀನಿವಾಸರಾವ್ ಕೊರಟಿ .... | ೩.೫೦ |
| ಚಿನ್ನದ ದೋಣಿ—ರವೀಂದ್ರನಾಥ ಠಾಕೂರ್ .... | ೧.೫೦ |
| ಚಂದುಮಾಮ—ಹೊಯಿಸಳ .... .... | ೦.೫೦ |
| ಚಂದ್ರನನ್ನು ತಂದರು—ಗ್ರಿಮ್ ಸೋದರರು .... | ೦.೫೦ |
| ಛತ್ರಪತಿ ಶಿವಾಜಿ—ಚ. ವಾಸುದೇವಯ್ಯ .... .... | ೨.೫೦ |
| ಜಗತ್ತುಗಳ ಹುಟ್ಟು ಸಾವು—ಆರ್. ಎಲ್. ನರಸಿಂಹಯ್ಯ .... | ೫.೦೦ |
| ಝಾನ್ಸಿಯರಾಣಿ—ವೃಂದಾವನಲಾಲ್ ವರ್ಮ .... | ೩.೭೫ |
| ಟಿಬೆಟ್ಟಿನ ಯೋಗಿ ಮಿಲರೇಪ—ಎಸ್. ಕೆ. ರಾಮಚಂದ್ರರಾವ್ | ೧.೭೫ |
| ದೀಪದಮಲ್ಲಿ—ಕೆ. ಎಸ್. ನರಸಿಂಹಸ್ವಾಮಿ .... .... | ೧.೭೫ |
| ದಾದಾಭಾಯಿ ನವರೋಜಿ—ಮುಸಾನಿ .... .... | ೨.೫೦ |
| ದೇಶವೇ ಅವರ ತಾಯಿ—ಹೊಯಿಸಳ .... .... | ೧.೨೫ |
| ಧ್ವಜರಕ್ಷಣೆ - ಪು. ತಿ. ನರಸಿಂಹಾಚಾರ್ .... .... | ೧.೨೫ |
| ನನ್ನ ಅಪ್ಸರೆ ಮತ್ತು ಮುಗುದೆಯರ ಪತ್ರಗಳು—ಸಿ. ಕೃಷ್ಣ | ೨.೬೫ |
| ನನ್ನ ಬಾಲ್ಯದ ದಿನಗಳು – ರವೀಂದ್ರನಾಥಠಾಕೂರ್ .... | ೦.೭೫ |
| ನವ್ಯಸಾಹಿತ್ಯ ನಿರ್ಮಾಣ—ಡಿ. ವಿ. ಜಿ. ಮೊದಲಾದವರು .... | ೦.೨೫ |
| ನಿರಾಶ್ರಿತೆ—ಎಚ್. ವಿ. ಸಾವಿತ್ರಮ್ಮ .... .... | ೧.೫೦ |
| ನೀತಿ ಚಿಂತಾಮಣಿ—ಭಾ. ೧—ಎಂ. ಎಸ್. ಪುಟ್ಟಣ್ಣ .... | ೦.೭೫ |
| ನೀತಿ ಚಿಂತಾಮಣಿ—ಭಾ. ೨—ಎಂ. ಎಸ್. ಪುಟ್ಟಣ್ಣ .... | ೦.೫೦ |
| ನೀತಿ ಚಿಂತಾಮಣಿ—ಭಾ. ೩—ಎಂ. ಎಸ್. ಪುಟ್ಟಣ್ಣ .... | ೦.೭೫ |
| ನೌಕಾಘಾತ—ರವೀಂದ್ರನಾಥ ಠಾಕೂರ್ .... .... | ೧.೫೦ |
| ಪಕ್ಷಿಗಾನ—ಆನಂದ .... .... | ೧.೨೫ |
| ಪತಾಕ್ಷಿ—ಹೊಯಿಸಳ .... .... | ೧.೬೫ |
| ಪುಟ್ಟರಸು—ಹೊಯಿಸಳ .... .... | ೧.೦೦ |
| ಪುರುಷಸೂಕ್ತ—ಡಿ. ವಿ. ಜಿ. .... .... | ೧.೨೫ |
| ಪೇಟೆ ಮಾತೇನಜ್ಜಿ ?—ಎಂ. ಎಸ್. ಪುಟ್ಟಣ್ಣ .... | ೦.೫೦ |
| ಪೋರಿ—ಹೊಯಿಸಳ .... .... | ೦.೫೦ |
| ಪ್ರೇಮಪ್ರಕರಣ—ಕ. ಶಂಕರ .... .... | ೧.೫೦ |

| | |
|---|---|
| ಬದುಕು ಜಟಕಾ ಬಂಡಿ—ರಂಗ .... .... | ೧.೫೦ |
| ಬಲಿದಾನ—ರವೀಂದ್ರನಾಥಠಾಕೂರ್ .... .... | ೧.೨೫ |
| ಬಾಪೂಜಿಗೆ ಬಾಷ್ಪಾಂಜಲಿ—ಕುವೆಂಪು .... .... | ೦.೫೦ |
| ಬೆಸ್ತರ ಕರಿಯು—ಗೊರೂರು ರಾಮಸ್ವಾಮಿ ಐಯಂಗಾರ್ .... | ೨.೨೫ |
| ಬೆಳದಿಂಗಳ ರಾತ್ರಿ—ರಾಜೇಶ್ವರಿ .... .... | ೧.೫೦ |
| ಬೆಂಜಮಿನ್ ಫ್ರಾಂಕ್ಲಿನ್—ಆತ್ಮಚರಿತ್ರೆ .... .... | ೨.೭೫ |
| ಭಾನುಮತಿ ಕಲ್ಯಾಣ—ಹಿರಿಯಣ್ಣ ಹೆಬ್ಬಾರ್ .... | ೧.೫೦ |
| ಭಾರತ ದರ್ಶನ—ಭಾ. ೨—ಜವಹರಲಾಲ್ ನೆಹರು .... | ೫.೦೦ |
| ಭಾರತ ದರ್ಶನ—ಭಾಗ. ೧, ೨—ಜವಹರಲಾಲ್ ನೆಹರು .... | ೧೧.೦೦ |
| ಭಾವತರಂಗ—ಎಂ. ಗೋ. ಅಡಿಗ .... .... | ೧.೨೫ |
| ಭೀಷ್ಮಚರಿತೆ—ಚ. ವಾಸುದೇವಯ್ಯ .... .... | ೩.೨೫ |
| ಭೂಗರ್ಭಯಾತ್ರೆ—ಜೂಲ್ಸ್ ವರ್ನ್ .... .... | ೧.೭೫ |
| ಭ್ರಮಾಧೀನ—ಸೇವ ನಮಿರಾಜಮಲ್ಲ .... .... | ೧.೫೦ |
| ಮನೆ-ಜಗತ್ತು—ರವೀಂದ್ರನಾಥ ಠಾಕೂರ್ .... .... | ೧.೫೦ |
| ಮಮತೆಯ ಸುಳಿ—ಶ್ರೀನಿವಾಸರಾವ್ ಕೊರಟಿ .... | ೧.೨೫ |
| ಮಲೆದೇಗುಲ—ಪು. ತಿ. ನರಸಿಂಹಾಚಾರ್ .... .... | ೧.೦೦ |
| ಮಹಾಚುನಾವಣೆ—ಡಿ. ವಿ. ಜಿ. .... .... | ೦.೨೫ |
| ಮಂಕುತಿಮ್ಮನ ಕಗ್ಗ—ಡಿ. ವಿ. ಜಿ. .... .... | ೧.೭೫ |
| ಮಾಡಿದ್ದುಣ್ಣೋ ಮಹಾರಾಯ—ಎಂ. ಎಸ್. ಪುಟ್ಟಣ್ಣ .... | ೩.೦೦ |
| ಮುಸುಗ ತೆಗೆಯೇ ಮಾಯಾಂಗನೆ—ಎಂ. ಎಸ್. ಪುಟ್ಟಣ್ಣ | ೧.೫೦ |
| ಮೂಕಪ್ರೇಮ—ವಿಶಾಲಾಕ್ಷಿ .... .... | ೧.೫೦ |
| ಮೂಲಾನಕ್ಷತ್ರ—ಶೇಷನಾರಾಯಣ .... .... | ೧.೨೫ |
| ಯಮನ ಸೋಲು ಮತ್ತು ವಾಲ್ಮೀಕಿಯ ಭಾಗ್ಯ—ಕುವೆಂಪು | ೧.೦೦ |
| ಯೋಗಾಯೋಗ—ರವೀಂದ್ರನಾಥ ಠಾಕೂರ್ .... | ೨.೫೦ |
| ರಕ್ತಕರವೀರ—ರವೀಂದ್ರನಾಥ ಠಾಕೂರ್ .... | ಅಚ್ಚಿನಲ್ಲಿ |
| ರಥಸಪ್ತಮಿ—ಪು. ತಿ. ನರಸಿಂಹಾಚಾರ್ .... .... | ೧.೨೫ |
| ರಾಕ್ಷಸನ ಮುದ್ರಿಕೆ—ತೀ. ನಂ. ಶ್ರೀಕಂಠಯ್ಯ .... | ೧.೭೫ |
| ರಾಜಕೀಯ ಪ್ರಸಂಗಗಳು—೧—ಡಿ. ವಿ. ಜಿ. .... | ೧.೭೫ |
| ರಾಜಕೀಯ ಪ್ರಸಂಗಗಳು—೨—ಡಿ. ವಿ. ಜಿ. .... | ಅಚ್ಚಿನಲ್ಲಿ |



# ಕಾವ್ಯಾಲಯದ ಪ್ರಕಟನೆಗಳು

| | |
|---|---|
| ರಾಜ್ಯಶಾಸ್ತ್ರ—ಡಿ. ವಿ. ಜಿ. .... .... | ೫.೦೦ |
| ರಾಜ್ಯಾಂಗ ತತ್ವಗಳು—ಡಿ. ವಿ. ಜಿ. .... .... | ೧.೨೫ |
| ರೈಟ್ ಸಹೋದರರು—ರೇನಾಲ್ಡ್ಸ (ಅನು. ಹೊಯಿಸಳ) .... | ೧.೨೬ |
| ರಂಗಭೂಮಿ—ಕ. ಶಂಕರ .... .... | ೧.೫೦ |
| ವಸಂತ ಕುಸುಮಾಂಜಲಿ—ಡಿ. ವಿ. ಜಿ. .... .... | ೦.೭೫ |
| ವಿಕಟಕವಿ ವಿಜಯ—ಪು. ತಿ. ನರಸಿಂಹಾಚಾರ್ .... | ೨.೨೫ |
| ವಿನೋದಿನಿ—ರವೀಂದ್ರನಾಥಠಾಕೂರ್ .... .... | ೧.೫೦ |
| ವಿವಾಹ ವಿಚ್ಛೇದ—ಕ. ಶಂಕರ .... .... | ೧.೫೦ |
| ಶಾರದಯಾಮಿನಿ—ಪು. ತಿ. ನರಸಿಂಹಾಚಾರ್ .... | ೧.೦೦ |
| ಶಿಲಾಲತೆ—ಕೆ. ಎಸ್. ನರಸಿಂಹಸ್ವಾಮಿ .... .... | ೧.೫೦ |
| ಶಿವರಾತ್ರಿ—ಗೊರೂರು ರಾಮಸ್ವಾಮಿ ಐಯಂಗಾರ್ .... | ೨.೨೫ |
| ಶ್ರೀ ರಾಮಕೃಷ್ಣ ಪರಮಹಂಸ—ಕುವೆಂಪು .... | ೩.೭೫ |
| ಶ್ರೀ ರಾಮಾಶ್ವಮೇಧಂ—ಮುದ್ದಣ .... .... | ೩.೨೫ |
| ಶೂದ್ರತಪಸ್ವಿ ಮತ್ತು ಬಲಿದಾನ—ಕುವೆಂಪು .... | ೧.೨೫ |
| ಶೈಲಿ—ಭಾ. ೨—ಎಸ್. ವಿ. ರಂಗಣ್ಣ .... .... | ೨.೨೦ |
| ಷೋಡಶಿ—ಕುವೆಂಪು .... .... | ೧.೨೦ |
| ಶುಭದಾ—ಶರಚ್ಚಂದ್ರ .... .... | ೧.೫೦ |
| ಸಾಹಿತ್ಯ—ಠಾಕೂರ್ (ಡಾ॥ ಎ. ಎನ್. ನರಸಿಂಹಯ್ಯ) .... | ೨.೦೦ |
| ಸಾಹಿತ್ಯ ಮತ್ತು ಜೀವನಕಲೆ—ರಾ. ಅನಂತಕೃಷ್ಣಶರ್ಮ .... | ೨.೨೫ |
| ಸಾಹಿತ್ಯ ಶಕ್ತಿ—ಡಿ. ವಿ. ಜಿ. .... .... | ೨.೨೫ |
| ಸಿರಿಬಾಯಿನುಡಿ—ಪು. ತಿ. ನರಸಿಂಹಾಚಾರ್ .... | ೦.೫೦ |
| ಸುಮತಿ ಮದನಕುಮಾರರ ಚರಿತ್ರೆ—ಎಂ.ಎಸ್.ಪುಟ್ಟಣ್ಣ .... | ೩.೨೫ |
| ಸೊಹ್ರಾಬ್ ಮತ್ತು ರುಸ್ತುಂ—ಕ. ನರಸಿಂಹಶಾಸ್ತ್ರಿ .... | ೦.೭೫ |
| ಸಂಸ್ಕೃತಿ—ಡಿ. ವಿ. ಜಿ. .... .... | ೨.೦೦ |
| ಹಗಲುಗನಸುಗಳು—ಎ.ಎನ್. ಮೂರ್ತಿರಾವ್ .... | ೧.೨೫ |
| ಹವಳದ ದ್ವೀಪ—ಎ.ಎನ್. ಮೂರ್ತಿರಾವ್ .... | ೧.೨೫ |
| ಹಳ್ಳಿಯ ಬಾಳು—ಗೊರೂರು ರಾಮಸ್ವಾಮಿ ಐಯಂಗಾರ್ .... | ೨.೨೫ |
| ಹಳ್ಳಿಯ ಹಾಡುಗಳು—ಸಂ : ಮಹದೇವನಾಯಕ್ .... | ೧.೨೫ |

ಕಾವ್ಯಾಲಯ ★ ಪ್ರಕಾಶಕರು ★ ಮೈಸೂರು